# ಅರ್ಥಶಾಸ್ತ್ರದ ಸಾಮಾನ್ಯ ನಿಯಮಗಳು

(ಮೈಸೂರು–ಬೆಂಗಳೂರು–ಕರ್ನಾಟಕ ವಿಶ್ವವಿದ್ಯಾನಿಲಯಗಳ ಮೊದಲನೆಯ
ಪ್ರಿ-ಯೂನಿವರ್ಸಿಟಿ ತರಗತಿಯ ಪಠ್ಯಕ್ರಮಕ್ಕನುಗುಣವಾಗಿ
ಬರೆಯಲಾಗಿದೆ)

ಬರೆದವರು :

**ಬಿ. ಯಸ್. ದಾಸ್, ಎಂ.ಎ., ಬಿ.ಎಡ್.**

ಪ್ರಿನ್ಸಿಪಾಲರು

**ಚಿರಂಜೀವಿ ಟ್ಯುಟೋರಿಯಲ್ ಕಾಲೇಜು, ದಾವಣಗೆರೆ**





ಪ್ರಕಾಶಕರು :

**ಚಿರಂಜೀವಿ ಪಬ್ಲಿಕೇಶನ್ಸ್**

**ಚಿರಂಜೀವಿ ಟ್ಯುಟೋರಿಯಲ್ ಕಾಲೇಜು,**

**ದಾವಣಗೆರೆ–೨**

# ಅರಿಕೆ

ಕರ್ನಾಟಕದಲ್ಲಿರುವ ವಿಶ್ವವಿದ್ಯಾನಿಲಯಗಳ ಕನ್ನಡ ಮಾಧ್ಯಮದಲ್ಲಿ ಈಗ ಅಧಿಕ ಸಂಖ್ಯೆಯಲ್ಲಿ ವಿದ್ಯಾರ್ಥಿ ವಿದ್ಯಾರ್ಥಿನಿಯರು ಅಭ್ಯಾಸ ಮಾಡು ತ್ತಿರುವುದು ಕನ್ನಡ ನಾಡಿಗೆ ಮತ್ತು ಕನ್ನಡ ನುಡಿಗೆ ಶ್ರೇಯಸ್ಕರವಾದು ದಾಗಿದೆ. ಅರ್ಥಶಾಸ್ತ್ರ ವಿಷಯದಲ್ಲಿ ಈಗಾಗಲೇ ಅನೇಕ ಕನ್ನಡ ಮಾಧ್ಯಮ ಪುಸ್ತಕಗಳು ಹೊರಬಂದಿವೆ. ಮೊದಲನೆಯ ಪ್ರಿ-ಯೂನಿವರ್ಸಿಟಿಯ ಮಕ್ಕಳಿಗೆ ಸುಲಭವಾಗಿ ತಿಳಿಯುವಂತೆ, ಸರಳವಾದ ಶೈಲಿಯಲ್ಲಿ ಈ ಪುಸ್ತಕವನ್ನು ಬರೆಯಲು ಪ್ರಯತ್ನಿಸಿರುವೆನು. ಸಾಧ್ಯವಾದಷ್ಟು ಮಟ್ಟಿಗೆ ಅರ್ಥಶಾಸ್ತ್ರದಲ್ಲಿ, ಬರುವ ಅನೇಕ ಕ್ಲಿಷ್ಟವಾದ ಶಬ್ದಗಳನ್ನು ಸಾಮಾನ್ಯವಾದ ಕನ್ನಡದಲ್ಲಿ ವಿವರಿಸಿರುವ ನನ್ನ ಪ್ರಯತ್ನ ಎಷ್ಟರಮಟ್ಟಿಗೆ ಯಶಸ್ವಿಯಾಗಿದೆಯೆಂದು ನಾನು ಹೇಳಲಾರೆ. ಆದರೂ ಸಹ ಈ ನನ್ನ ಸಣ್ಣ ಪುಸ್ತಕ ಕರ್ನಾಟಕ ದಲ್ಲಿರುವ ಮೂರು ವಿಶ್ವವಿದ್ಯಾನಿಲಯಗಳ ಮೊದಲನೆಯ ಪ್ರಿ-ಯೂನಿ ವರ್ಸಿಟಿಯ ವಿದ್ಯಾರ್ಥಿ ವೃಂದಕ್ಕೆ ಹೆಚ್ಚು ಉಪಯೋಗವಾಗುವುದು ಎಂಬ ಭರವಸೆ ನನಗಿದೆ.

ನನ್ನೀ ಪುಸ್ತಕನ್ನು ಸುಂದರವಾಗಿ ಮುದ್ರಿಸಿಕೊಟ್ಟಿರುವ ಮೈಸೂರಿನ ಪಂಚಾಚಾರ್ಯ ಛಾಪಖಾನೆಯ ವ್ಯವಸ್ಥಾಪಕರಾದ ಶ್ರೀ. ಬಿ. ಮಹದೇವಯ್ಯ ನವರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

**ಬಿ. ಯಸ್. ದಾಸ್.**

# ವಿಷಯಾನುಕ್ರಮಣಿಕೆ

## ಅಭ್ಯಾಸ 1

# ಅರ್ಥಶಾಸ್ತ್ರದ ಸ್ವರೂಪ

### ಅರ್ಥಶಾಸ್ತ್ರದ ವಿವರಣೆ-ಸ್ಪಷ್ಟೀಕರಣ

ಮನುಷ್ಯನು ಹಿಂದಿನ ಕಾಲದಿಂದಲೂ ತನ್ನ ಜೀವನಕ್ಕೆ ಬೇಕಾಗುವ ಅವಶ್ಯಕತೆಗಳನ್ನು ಸಂಗ್ರಹಿಸುವ ಚಟುವಟಿಕೆಗಳಲ್ಲಿ ತೊಡಗಿರುವನು. ಆ ಕಾಲದಲ್ಲಿ ಉದರ ಪೋಷಣೆಯೇ ಮಾನವ ಜೀವನದ ಮುಖ್ಯ ಗುರಿಯಾಗಿತ್ತು. ಆದರೆ ಜ್ಞಾನದ ಬೆಳವಣಿಗೆ ಹೆಚ್ಚಿದಂತೆಲ್ಲಾ, ಜೀವನದ ಗುರಿ ಕೇವಲ ಆಹಾರ ಸಂಪಾದನೆಯೊಂದೇ ಅಲ್ಲ ಮತ್ತು ಅದರೊಂದಿಗೆ ಇನ್ನೂ ಅನೇಕ ವಿಷಯಗಳನ್ನು ಪಡೆಯುವುದು ಎಂದಾಯಿತು. ಆದರೆ ಇಂದಿಗೂ ಸಹ ಜೀವನಕ್ಕೆ ಅತ್ಯಾವಶ್ಯಕವಾಗಿರುವ ಅನ್ನ, ಬಟ್ಟೆ, ವಸತಿ ಇವುಗಳನ್ನು ಪಡೆಯುವದೇ ಮಾನವನ ಹೋರಾಟದ ಮುಖ್ಯ ಗುರಿಯಾಗಿರುವುದು. ಈ ಅವಶ್ಯಕತೆಗಳನ್ನು ಹೊಂದುವ ಬಗೆ ಹೇಗೆ ಮತ್ತು ಎಷ್ಟು ಹೊಂದಬೇಕು ಎಂಬುದು ಜೀವನದ ಒಂದು ಮುಖ್ಯ ವಿಷಯವಾಗಿ ಪರಿಣಮಿಸಿತು. ಮನುಷ್ಯನು ಬಯಸುವ ವಸ್ತು ವಿಷಯಗಳು ಬಹಳ. ಆದರೆ ಅವುಗಳನ್ನು ಈಡೇರಿಸುವ ಮಾರ್ಗಗಳು ಅತೀ ಕಡಿಮೆ. ಇಂದು ಒಬ್ಬ ವ್ಯಕ್ತಿ ಸಮಾಜದಲ್ಲಿ ಚೆನ್ನಾಗಿ ಬದುಕಬೇಕಾದರೆ ಆ ವ್ಯಕ್ತಿಗೆ ಅನೇಕ ವಸ್ತುಗಳು ಬೇಕಾಗುವುವು. ಈ ಬಗೆಯ ಮಾನವ ಜೀವನದ ಅವಶ್ಯಕತೆಗಳ ಅಭ್ಯಾಸ ಸಮಾಜಶಾಸ್ತ್ರದಲ್ಲಿ ಪ್ರಾರಂಭವಾಯಿತು. ಮಾನವನ ಆರ್ಥಿಕ ಜೀವನದ ಅವಶ್ಯಕತೆಗಳನ್ನು ಕುರಿತು ಚರ್ಚಿಸುವ ಶಾಸ್ತ್ರವೇ ಅರ್ಥಶಾಸ್ತ್ರ ಎಂದು ಆಗಿರುವುದು. ಇದು ಕೂಡ ಸಮಾಜಶಾಸ್ತ್ರದ ಒಂದು ಭಾಗವಾಗಿರುವುದು. ಮಾನವನ ಅಪರಿಮಿತವಾದ ಬಯಕೆಗಳನ್ನು ಈಡೇರಿಸಲು ಪ್ರಕೃತಿಸಂಪತ್ತನ್ನು ಉಪಯೋಗಿಸಿಕೊಂಡು ಅತಿ ಕಡಿಮೆ ಶ್ರಮಶಕ್ತಿಯಿಂದ ಹೆಚ್ಚಿನ ಪ್ರಮಾಣದಲ್ಲಿ ಜೀವನಾವಶ್ಯಕ ವಸ್ತುಗಳನ್ನು ಪಡೆಯಲು ಪ್ರಯತ್ನಿಸಬೇಕು.

ಹಿಂದಿನ ಕಾಲದಲ್ಲಿ ಜನರು ತಮ್ಮ ಬಯಕೆಗಳನ್ನು ನೇರವಾಗಿ ಪೂರೈಸಿಕೊಳ್ಳುತ್ತಿದ್ದರು. ಆದರೆ ಜನಸಂಖ್ಯೆ ಹೆಚ್ಚಿದಂತೆಲ್ಲಾ ಮತ್ತು ನಾಗರಿಕ ಮಾನವನ ಅಪೇಕ್ಷೆಗಳೂ ಅಧಿಕವಾದಂತೆಲ್ಲಾ ಇದು ಸಾಧ್ಯವಾಗ

ಲಿಲ್ಲ. ಒಬ್ಬೊಬ್ಬರು ಒಂದೊಂದು ವಸ್ತುವಿನ ತಯಾರಿಕೆಯಲ್ಲಿ ತೊಡಗಿ, ಪರಸ್ಪರ ವಿನಿಮಯದ ಮೂಲಕ, ಎಲ್ಲರೂ ತಮ್ಮ ಬಯಕೆಗಳನ್ನು ಪೂರೈಸ ಲಾರಂಭಿಸಿದರು. ಈ ರೀತಿಯಾಗಿ ಮನುಷ್ಯನ ಆರ್ಥಿಕ ಜೀವನದಲ್ಲಿ ಮಹತ್ತರವಾದ ಅನೇಕ ಮಾರ್ಪಾಡುಗಳು ಉಂಟಾದವು. ಮಾನವನ ಬಯಕೆಗಳು ಮತ್ತು ಅವುಗಳ ಪೂರೈಕೆಗೆ ಉತ್ಪಾದನೆ, ವಿನಿಮಯ, ಮತ್ತು ವಿತರಣೆಗಳು ಒಂದು ಸ್ವರೂಪವನ್ನು ತಾಳಿದವು.

ಅರ್ಥಶಾಸ್ತ್ರ ಇಂದು ಜಗತ್ತಿನಲ್ಲಿರುವ ಅತೀ ಮುಖ್ಯ ಶಾಸ್ತ್ರಗಳ ಲ್ಲೊಂದಾಗಿದೆ. ಇದರ ಕ್ಷೇತ್ರವೈಶಾಲ್ಯ ಅಧಿಕವಾಗಿರುವುದು. ಇದರ ಸ್ಪಷ್ಟೀ ಕರಣದ ಬಗ್ಗೆ ಹಿರಿಯ ಅರ್ಥಶಾಸ್ತ್ರಜ್ಞರಲ್ಲಿ ಕೂಡ ಭಿನ್ನಾಭಿಪ್ರಾಯಗಳು ಉಂಟಾಗಿವೆ. ಅರ್ಥಶಾಸ್ತ್ರದ ಬಗ್ಗೆ ಕೆಲವು ಪ್ರಮುಖ ವಿವರಣೆಗಳನ್ನು ಈ ಶಾಸ್ತ್ರದ ಹಿರಿಯ ತಜ್ಞರುಗಳಾದ ಆಡಂಸ್ಮಿತ್, ಮಾರ್ಷಲ್, ಪಿಗು ಮತ್ತು ರಾಬಿನ್ಸ್ ಮುಂತಾದವರು ನಿರೂಪಿಸಿದ್ದಾರೆ. ಇವರೆಲ್ಲರ ವಿವರಣೆಗಳನ್ನು ಮುಖ್ಯವಾಗಿ ಎರಡು ಭಾಗಗಳನ್ನಾಗಿ ವಿಂಗಡಿಸಬಹುದು.

(೧) ಮೊದಲನೆಯದು ಸಂಪತ್ತು ಮತ್ತು ಕ್ಷೇಮದ ವಿವರಣೆ

(೨) ವಿರಳತೆಯ ವಿವರಣೆ.

ಅರ್ಥಶಾಸ್ತ್ರವನ್ನು ಸಂಪತ್ತು ಮತ್ತು ಕ್ಷೇಮಾಭ್ಯುದಯವನ್ನು ಗಳಿಸುವ ಶಾಸ್ತ್ರವೆಂದು ಸಾರಿದವರಲ್ಲಿ ಮೊದಲಿಗರೆಂದರೆ ಈ ಶಾಸ್ತ್ರದ ಪಿತಾಮಹನೆನಿಸಿದ ಆಡಂ ಸ್ಮಿತ್ತರು. ಇವರು ೧೭೭೬ ರಲ್ಲಿ "ರಾಷ್ಟ್ರಗಳ ಸಂಪತ್ತಿನ ವಿಚಾರ" (An Enquiry into the Nature and causes of the Wealth of Nations) ಎಂಬ ಪುಸ್ತಕವನ್ನು ಪ್ರಕಟಿಸಿದರು. ಇದರಲ್ಲಿ ಇವರು ಅರ್ಥ ಶಾಸ್ತ್ರವು "ಒಂದು ರಾಷ್ಟ್ರದ ಸಂಪತ್ತಿನ ಸ್ವರೂಪ ಮತ್ತು ಅದರ ಬೆಳವಣಿಗೆಯ ಕಾರಣಗಳನ್ನು ಅಭ್ಯಾಸಮಾಡುತ್ತದೆ" ಎಂದು ಹೇಳಿರುವರು. ಮಾನವನ ಎಲ್ಲಾ ಚಟುವಟಿಕೆಗಳು ಸಂಪತ್ತನ್ನು ಗಳಿಸುವುದಕ್ಕೆ ಮಾತ್ರ ಎಂದು ಹೇಳಿದರು. ಮನುಷ್ಯನ ಹೋರಾಟದ ಗುರಿಗಳಲ್ಲಿ ಸಂಪತ್ತನ್ನು ಗಳಿಸುವುದೇ ಅತೀ ಮುಖ್ಯವಾದ ಗುರಿ ಎಂದರು.

ಆಡಂ ಸ್ಮಿತ್ತರ ಸಿದ್ಧಾಂತವನ್ನು ಅನೇಕ ಅರ್ಥಶಾಸ್ತ್ರಜ್ಞರು ಒಪ್ಪಲಿಲ್ಲ. ಅವರ ಪ್ರಕಾರ ಕೇವಲ ಸಂಪತ್ತನ್ನು ಗಳಿಸುವುದೇ ಜೀವನದ ಗುರಿಯಲ್ಲ;

ಸಂಪತ್ತು ಮನುಷ್ಯನ ಕ್ಷೇಮಾಭ್ಯುದಯಕ್ಕೆ ಬೇಕಾಗುವ ಸಾಧನೆಗಳಲ್ಲೊಂದು ಮಾತ್ರವೆಂದು ಹೇಳಿದರು. ಈ ರೀತಿ ಸಂಪತ್ತು ಮತ್ತು ಕ್ಷೇಮಾಭ್ಯುದಯದ ಹೊಂದಾಣಿಕೆಯನ್ನು ಮಾಡಿ ಅರ್ಥಶಾಸ್ತ್ರದ ವಿವರಣೆಯನ್ನು ಸ್ಪಷ್ಟೀಕರಿಸಿದವರೆಂದರೆ ಆಲ್‌ಫ್ರೆಡ್ ಮಾರ್ಷಲ್ ಮತ್ತು ಎ. ಸಿ. ಪಿಗು ಎಂಬವರು.

ಮಾರ್ಷಲನ ಹೇಳಿಕೆಯಂತೆ " ಅರ್ಥಶಾಸ್ತ್ರವು ಮಾನವನ ಸಾಮಾನ್ಯ ವ್ಯವಹಾರಿಕ ಜೀವನದ ಅಭ್ಯಾಸ " ಎಂದನು. ಮನುಷ್ಯನು ಪ್ರಾಪಂಚಿಕ ಸಂಪತ್ತನ್ನು ಗಳಿಸಲು ಮಾಡುವ ಪ್ರಯತ್ನಗಳು, ಮತ್ತು ಅದರ ಅನುಭೋಗ ಇವೇ ಅರ್ಥಶಾಸ್ತ್ರದ ಮೂಲ ವಿಷಯವಾಗಿವೆ ಎಂದು ಹೇಳಿದನು. ಈ ಸಿದ್ಧಾಂತದ ಪ್ರಕಾರ ಅರ್ಥಶಾಸ್ತ್ರ ಎಂಬುದು ಕೇವಲ ಸಂಪತ್ತಿನ ಅಭ್ಯಾಸವೇ ಮಾತ್ರವಲ್ಲದೆ ಅದಕ್ಕಿಂತಲೂ ಹೆಚ್ಚಾಗಿ ಮಾನವನ ಕ್ಷೇಮಾಭ್ಯುದಯಕ್ಕೆ ಮತ್ತು ಮಾನವ ಜೀವನದ ಸುಖಸಂಪತ್ತಿಗೆ ಸಂಬಂಧಿಸಿದುದಾಗಿದೆ ಎಂದು ತಿಳಿಯುವುದು.

ಆಲ್ಫ್ರೆಡ್ ಮಾರ್ಷಲನ ಸಿದ್ಧಾಂತವನ್ನು ಪಿಗು ಮಹಾಶಯನು ಸ್ವಲ್ಪ ಮಟ್ಟಿಗೆ ಸುಧಾರಿಸಿರುವನು. ಇವನ ಪ್ರಕಾರ ಯಾವ ಯಾವ ಮಾನವ ಚಟುವಟಿಕೆಗಳನ್ನು ಪ್ರತ್ಯಕ್ಷವಾಗಿಯಾಗಲೀ ಅಥವಾ ಪರೋಕ್ಷವಾಗಿಯಾಗಲೀ ಹಣದ ರೂಪದಿಂದ ಅಳತೆ ಮಾಡಬಹುದೋ, ಅಂತಹ ಚಟುವಟಿಕೆಗಳನ್ನು ಅರ್ಥಶಾಸ್ತ್ರದ ವಿಷಯವೆಂದು ಹೇಳಬಹುದು. ಹಣದ ರೂಪದಿಂದ ಅಳೆಯಬಹುದಾದ ಎಲ್ಲ ಚಟುವಟಿಕೆಗಳನ್ನು ಆರ್ಥಿಕ ಪ್ರಯತ್ನಗಳೆಂದು ಕರೆಯಲಾಗುವುದು. ಪಿಗು ಮಹಾಶಯನ ಈ ವಿವರಣೆ ಕೂಡ ಅಷ್ಟೊಂದು ಸಮಂಜಸವಾದುದಲ್ಲ ಎಂದು ಅನೇಕರು ಟೀಕಿಸಿದ್ದಾರೆ. ಏಕೆಂದರೆ ಎಲ್ಲಾ ಆರ್ಥಿಕ ಪ್ರಯತ್ನಗಳು ಮಾನವ ಕಲ್ಯಾಣವನ್ನು ಸಾಧಿಸಲಾರವು.

ಇತ್ತೀಚಿನ ವರೆಗೆ ಸಂಪತ್ತು ಮತ್ತು ಕ್ಷೇಮಾಭ್ಯುದಯದ ವಿವರಣೆಗೆ ಸ್ವಲ್ಪ ಮನ್ನಣೆ ದೊರೆತಿತ್ತು. ಆದರೆ ೧೯೩೨ ರಲ್ಲಿ ಲಿಯೋನೆಲ್ ರಾಬಿನ್ಸ್ ಎಂಬ ಅರ್ಥಶಾಸ್ತ್ರಜ್ಞನು ತನ್ನದೇ ಆದ ಒಂದು ಹೊಸ ಸಿದ್ಧಾಂತವನ್ನು ನಿರೂಪಿಸಿದನು. ರಾಬಿನ್ಸನ ಸಿದ್ಧಾಂತವು ಅರ್ಥಶಾಸ್ತ್ರದ ಸ್ವರೂಪವನ್ನು ಬಹಳ ಮಟ್ಟಿಗೆ ಬದಲಾಯಿಸಿತು. ರಾಬಿನ್ಸನು ಸಂಪತ್ತು ಅಥವಾ

ಕ್ಷೇಮಾಭ್ಯುದಯಗಳ ವಿಷಯವಾಗಿ ಏನನ್ನೂ ಹೇಳಲಿಲ್ಲ. ಅದರಿಂದಲೇ ಇವನ ಸಿದ್ಧಾಂತವನ್ನು ಅರ್ಥಶಾಸ್ತ್ರದ ಒಂದು ನವ್ಯ ಸಿದ್ಧಾಂತವೆಂದು ಕರೆಯಲಾಗಿದೆ. ರಾಬಿನ್ಸನು ತನ್ನ ವಿವರಣೆಯಲ್ಲಿ ನಿರೂಪಿಸಿದ ಮುಖ್ಯವಾದ ಅಂಶಗಳೆಂದರೆ

(೧) ಮಾನವನ ಬೇಡಿಕೆಗಳು ಅಪರಿಮಿತವಾಗಿರುವುವು.

(೨) ಈ ರೀತಿ ಅಪರಿಮಿತವಾಗಿರುವ ಬೇಡಿಕೆಗಳ ಪೂರೈಕೆಯ ಮಾರ್ಗಗಳು ಮಿತವಾಗಿರುವುವು.

(೩) ಆದುದರಿಂದ ಮಾನವನ ಜೀವನವನ್ನೆಲ್ಲಾ ತನ್ನ ಬಯಕೆ ಅಥವಾ ಬೇಡಿಕೆಗಳನ್ನು ಪೂರೈಸಿಕೊಳ್ಳುವುದರಲ್ಲಿಯೇ ಕಳೆಯಲಾಗುವುದು.

(೪) ಈ ಅಪರಿಮಿತವಾದ ಸಾಧನ ಸಂಪತ್ತುಗಳ ಉಪಯೋಗಗಳು ಅನೇಕ ರೀತಿಯದಾಗಿರುವುವು. ಅವುಗಳಲ್ಲಿ ಯಾವುದಾದರೂ ಒಂದೆರಡನ್ನು ಮಾತ್ರ ಪಡೆಯಬಹುದೇ ವಿನಃ ಎಲ್ಲವನ್ನೂ ಹೊಂದಲು ಸಾಧ್ಯವಿಲ್ಲ.

ರಾಬಿನ್ಸನ ಸಿದ್ಧಾಂತವನ್ನು ನಿರೂಪಿಸಲು ಒಂದು ಉದಾಹರಣೆಯನ್ನು ಈ ರೀತಿ ಕೊಡಬಹುದು. ರಾಮ ಎಂಬವನ ಹತ್ತಿರ ಐದು ರೂಪಾಯಿ ಹಣವಿರುವುದು. ಈ ಹಣದಲ್ಲಿ ಅವನಿಗೆ ಅನೇಕ ಬಯಕೆಗಳನ್ನು ಪೂರೈಸುವ ಇಚ್ಛೆಯಾಗುವುದು. ಮುಖ್ಯವಾಗಿ ಒಂದು ಪೆನ್ನು ಕೊಂಡುಕೊಳ್ಳಬೇಕಾಗಿರುವುದು, ಅಥವಾ ತನ್ನ ತಮ್ಮನಿಗೆ ಒಂದು ಅಂಗಿಯನ್ನು ಕೊಳ್ಳಬೇಕೆಂದೆನಿಸುವುದು, ಅಥವಾ ತನ್ನ ಗೆಳೆಯನೊಂದಿಗೆ ಒಂದು ಸಿನೇಮಾ ನೋಡಬೇಕೆನ್ನಿಸುವುದು; ಆದರೆ ತನ್ನ ಮಿತವಾದ ಹಣದಿಂದ ಈ ಮೂರು ಬಯಕೆಗಳಲ್ಲಿ ಯಾವುದಾದರೂ ಒಂದನ್ನು ಪೂರೈಸಬಹುದೇ ವಿನಃ ಮೂರನ್ನೂ ಪೂರೈಸಲು ಸಾಧ್ಯವಾಗುವುದಿಲ್ಲ.

ಇದರಿಂದ ತಿಳಿಯಬಹುದಾದ ಮುಖ್ಯ ವಿಷಯವೆಂದರೆ ಮನುಷ್ಯನ ಬಯಕೆಗಳು ಅಪರಿಮಿತವಾಗಿದ್ದು ಮತ್ತು ಅವುಗಳ ಪೂರೈಕೆಯ ಮಾರ್ಗಗಳು ಮಿತವಾಗಿರುವುದರಿಂದ, ಮನುಷ್ಯನು ತನ್ನ ಬಯಕೆಗಳನ್ನು ಆರಿಸಿಕೊಳ್ಳಬೇಕಾಗುವುದು. ಈ ರೀತಿ ಬಯಕೆಗಳ ಆಯ್ಕೆಯ ಸಮಸ್ಯೆಯೇ ಅರ್ಥಶಾಸ್ತ್ರದ ಮೂಲ ವಿಷಯವಾಗಿರುವುದು. ಅರ್ಥಶಾಸ್ತ್ರದ ಬಗ್ಗೆ

ರಾಬಿನ್ಸನ ವಿವರಣೆಯನ್ನು ಸಂಕ್ಷಿಪ್ತವಾಗಿ ಈ ರೀತಿ ನಿರೂಪಿಸುಬಹುದು. "ಅಪರಿಮಿತವಾದ ಮಾನವ ಬಯಕೆಗಳು; ಮಿತಿಯುಳ್ಳ ಹಾಗೂ ವಿವಿಧ ಉಪಯೋಗಗಳಿಗೆ ಆಗುವ ಸಾಧನಗಳು; ಇದರಿಂದ ಉದ್ಭವಿಸುವ ಆಯ್ಕೆ ಮತ್ತು ಇಂತಹ ಪರಿಸ್ಥಿತಿಯಲ್ಲಿ ಮಾನವನು ನಡೆದುಕೊಳ್ಳುವ ರೀತಿ" ಇವು ಗಳನ್ನು ಅಭ್ಯಾಸಮಾಡುವುದೇ ಅರ್ಥಶಾಸ್ತ್ರದ ಮುಖ್ಯ ಗುರಿ.

ರಾಬಿನ್ಸನ ವಿವರಣೆಯು ಅತ್ಯಂತ ಸಮಾಧಾನಕರವಾಗಿ ಕಂಡು ಬರುವುದು. ಈ ವಿವರಣೆ ಮಾನವನ ಎಲ್ಲಾ ಚಟುವಟಿಕೆಗಳನ್ನು ಒಳ ಗೊಂಡಿರುವುದು. ಅರ್ಥಶಾಸ್ತ್ರದ ಸ್ಪಷ್ಟೀಕರಣದ ನಿರೂಪಣೆಯಲ್ಲಿ ಈಗ ಮಾರ್ಷಲನ ದಾರಿಯನ್ನೂ ಮತ್ತು ರಾಬಿನ್ಸನ ದಾರಿಯನ್ನೂ ಅನುಸರಿಸು ವವರು ಇದ್ದಾರೆ. ಈ ರೀತಿಯ ಭಿನ್ನಾಭಿಪ್ರಾಯವಿರುವುದು ಅನಿವಾರ್ಯ. ಏಕೆಂದರೆ ಅರ್ಥಶಾಸ್ತ್ರವು ಮಾನವನಿಗೆ ಮತ್ತು ಮಾನವ ಸಮಾಜಕ್ಕೆ ಸಂಬಂಧಿಸಿದ ವಿಷಯವಾಗಿದೆ. ಮನುಷ್ಯನ ನಡವಳಿಕೆ ಮತ್ತು ಸಮಾಜದ ಆಗುಹೋಗುಗಳನ್ನು ಯಾವುದೇ ಒಂದು ಅಳತೆಗೋಲಿನಿಂದ ಅಳೆಯಲು ಸಾಧ್ಯವಿಲ್ಲ. ಇದರಿಂದಲೇ ಅರ್ಥಶಾಸ್ತ್ರಕ್ಕೆ ಎಲ್ಲರಿಗೂ ಒಪ್ಪುವಂತಹ ಒಂದು ಸೂತ್ರವನ್ನು ಇಂದಿಗೂ ಕೂಡ ರಚಿಸಲು ಸಾಧ್ಯವಾಗಿರುವುದಿಲ್ಲ.

## ಅರ್ಥಶಾಸ್ತ್ರಕ್ಕೂ ಮತ್ತು ಇತರ ಶಾಸ್ತ್ರಗಳಿಗೂ ಇರುವ ಸಂಬಂಧ

ಅರ್ಥಶಾಸ್ತ್ರವು ಒಂದು ಸಮಾಜಶಾಸ್ತ್ರ. ಸಮಾಜ ಜೀವಿಯಾದ ಮಾನವನ ನಡವಳಿಕೆಯ ಅಭ್ಯಾಸವೇ ಅರ್ಥಶಾಸ್ತ್ರವೆಂದು ಹೇಳಿದರೆ ತಪ್ಪಾಗಲಾರದು. ಅರ್ಥಶಾಸ್ತ್ರವು ಕೂಡ ಒಂದು ಸಮಾಜಶಾಸ್ತ್ರವಾಗಿರುವುದ ರಿಂದ ಇದಕ್ಕೂ ಮತ್ತು ಇನ್ನಿತರ ಸಮಾಜಶಾಸ್ತ್ರಗಳಿಗೂ ಹೆಚ್ಚಿನ ಸಂಬಂಧ ವಿರುವುದು. ಮಾನವರು ನಾಗರಿಕತೆಯ ಆದಿಯಲ್ಲಿ ಎಲ್ಲಾ ಸಾಮಾಜಿಕ ಸಂಬಂಧಗಳನ್ನು 'ಸಾಮಾಜಿಕ ಶಾಸ್ತ್ರ' ಎಂಬ ಒಂದೇ ವಿಷಯದಲ್ಲಿ ಅಭ್ಯಾಸ ಮಾಡುತ್ತಿದ್ದರು. ಆದರೆ ಸಾಮಾಜಿಕ ಶಾಸ್ತ್ರವನ್ನು ಅನೇಕ ಭಾಗ ಗಳನ್ನಾಗಿ ವಿಂಗಡಿಸಿರುವರು. ಮುಖ್ಯವಾದವುಗಳೆಂದರೆ ಅರ್ಥಶಾಸ್ತ್ರ, ರಾಜ್ಯ ಶಾಸ್ತ್ರ, ನೀತಿಶಾಸ್ತ್ರ, ಇತಿಹಾಸ, ಮಾನವಶಾಸ್ತ್ರ ಎಂದು ಮುಂತಾಗಿ ವಿಭಜಿ ಸಿರುವರು. ಈ ಎಲ್ಲಾ ಶಾಸ್ತ್ರಗಳೂ ಪರಸ್ಪರ ಸಂಬಂಧದಿಂದ ಕೂಡಿರುವು ದಾಗಿವೆ.

## ಅರ್ಥಶಾಸ್ತ್ರ ಮತ್ತು ರಾಜ್ಯಶಾಸ್ತ್ರ

ಒಂದು ಕಾಲದಲ್ಲಿ ಇವೆರಡೂ ಸೇರಿ ಒಂದೇ ಶಾಸ್ತ್ರವಾಗಿತ್ತು. ಆಗ ಅರ್ಥಶಾಸ್ತ್ರವನ್ನು "ರಾಜಕೀಯ ಅರ್ಥಶಾಸ್ತ್ರ" ಎಂದು ಕರೆಯುತ್ತಿದ್ದರು. ಎಲ್ಲಾ ರಾಜಕೀಯ ಸಮಸ್ಯೆಗಳು ಆರ್ಥಿಕ ಸಮಸ್ಯೆಗಳಿಂದ ಉದ್ಭವಿಸುವುವು. ಆರ್ಥಿಕ ಪರಿಸ್ಥಿತಿ ಸುಧಾರಿಸಿದ ರಾಷ್ಟ್ರಗಳಲ್ಲಿ ರಾಜಕೀಯ ಚಟುವಟಿಕೆಗಳು ಬಹಳ ಸರಾಗವಾಗಿ ನಡೆದುಕೊಂಡು ಹೋಗುವುವು. ದೇಶದ ಎಲ್ಲ ರಾಜಕೀಯ ಸಂಘಟನೆಗಳು ಜನರ ಆರ್ಥಿಕ ಪ್ರಭಾವಕ್ಕೆ ಒಳಗಾಗಿರುವುವು. ಸಮಾಜದ ಆರ್ಥಿಕ ನಿರ್ಣಯವೇ ಸಮಾಜವಾದಿ ಅಥವಾ ಬಂಡವಾಳ ಶಾಯಿ ರಾಷ್ಟ್ರಗಳನ್ನು ಸ್ಥಾಪಿಸುವುದಾಗಿದೆ. ಒಂದು ದೇಶದ ಸಮಗ್ರ ರಾಜಕೀಯ ನಿರ್ಣಯಗಳು ಆ ದೇಶದ ಜನರ ಆರ್ಥಿಕ ಮಟ್ಟವನ್ನು ಅವಲಂಬಿಸುವುವು. ಸಮಾಜದ ಏಳಿಗೆಗೆ ಮತ್ತು ರಾಷ್ಟ್ರದ ಅಭಿವೃದ್ಧಿಗೆ ಈ ಎರಡು ಶಾಸ್ತ್ರಗಳೂ ಒಂದು ನಾಣ್ಯದ ಎರಡು ಮುಖಗಳಿದ್ದಂತೆ–ಒಂದನ್ನು ಅನುಸರಿಸಿಕೊಂಡು ಮತ್ತೊಂದು ಹೋಗುವುದು.

## ಅರ್ಥಶಾಸ್ತ್ರ ಮತ್ತು ನೀತಿಶಾಸ್ತ್ರ

ನೀತಿಶಾಸ್ತ್ರವೆಂಬುದು ಮುಖ್ಯವಾಗಿ ಮಾನವ ಜೀವನದ ಕೆಲವು ತತ್ವಗಳಿಗೆ ಸಂಬಂಧಪಟ್ಟುದಾಗಿದೆ. ಜೀವನದಲ್ಲಿ ಯಾವುದು ಒಳ್ಳೆಯದು, ಯಾವುದು ಕೆಟ್ಟದು, ಯಾವುದನ್ನು ಮಾಡಬೇಕು ಮತ್ತು ಯಾವುದನ್ನು ಮಾಡಬಾರದು ಎಂದು ಮುಂತಾಗಿ ಕೆಲವು ನೀತಿನಿಯಮಗಳ ಕಟ್ಟಳೆಗಳನ್ನು ನೀತಿಶಾಸ್ತ್ರ ಹಾಕಿಕೊಡುವುದು. ಇಂತಹ ನೀತಿನಿಯಮಗಳನ್ನು ಒಂದು ರಾಷ್ಟ್ರದ ಆರ್ಥಿಕ ಸಂಘಟನೆಯಲ್ಲಿ ಕೂಡ ಅನುಸರಿಸಬೇಕಾಗುವುದು. ಉತ್ಪಾದನೆಯ ಕ್ರಮದಲ್ಲಿ, ಸಂಪತ್ತನ್ನು ಹಂಚಿಕೊಳ್ಳುವುದರಲ್ಲಿ ಇಂತಹ ನೈತಿಕ ಕಟ್ಟಳೆಗಳು ಅತೀ ಮುಖ್ಯವಾದುವುಗಳಾಗಿವೆ. ನಾವು ಆರ್ಥಿಕ ಕಲ್ಯಾಣದ ಬಗ್ಗೆ ಪ್ರಯತ್ನಿಸುವಾಗ–ಈ ಕಲ್ಯಾಣವೆಂಬ ನೀತಿಯ ವಿಷಯವನ್ನು ಅಲ್ಲಗಳೆಯಲು ಸಾಧ್ಯವಿಲ್ಲ.

## ಅರ್ಥಶಾಸ್ತ್ರ ಮತ್ತು ಇತಿಹಾಸ

ಇತಿಹಾಸವೆಂದರೆ ಹಿಂದಿನ ಘಟನೆಗಳ ಮತ್ತು ಮುಖ್ಯವಾಗಿ ಹಿಂದಿನ

ಕಾಲದ ಜನಜೀವನವನ್ನು ಕುರಿತು ಅಭ್ಯಾಸಮಾಡುವ ಶಾಸ್ತ್ರವಾಗಿರುವುದು. ಇದರಲ್ಲಿ ಹಿಂದೆ ಪ್ರಪಂಚದಲ್ಲಿ ನಡೆದ ಹಲವಾರು ಆರ್ಥಿಕ ಘಟನೆಗಳ ಬಗ್ಗೆ ಕೂಡ ಕಲಿಯುತ್ತೇವೆ. ಔದ್ಯೋಗಿಕ ಮತ್ತು ವ್ಯವಸಾಯದ ಕ್ರಾಂತಿಗಳು, ಕೂಲಿಕಾರ ಸಂಘಗಳ ಚಟುವಟಿಕೆಗಳು, ಇವೇ ಮೊಲಾದ ಅನೇಕ ವಿಷಯ ಗಳನ್ನು ಕಾಣುತ್ತೇವೆ. ಈ ಘಟನೆಗಳ ಹಿನ್ನೆಲೆಯಲ್ಲಿ ಅರ್ಥಶಾಸ್ತ್ರ ತನ್ನ ಭವಿಷ್ಯವನ್ನು ರೂಪಿಸಿಕೊಳ್ಳಲು ಸಾಧ್ಯವಾಗುವುದು.

### ಅರ್ಥಶಾಸ್ತ್ರ ಮತ್ತು ಮಾನಸಿಕ ಶಾಸ್ತ್ರ

ಮನುಷ್ಯನು ಮಾಡುವ ಪ್ರತಿಯೊಂದು ಕಾರ್ಯದಲ್ಲಿಯೂ ಆತನ ಮಾನಸಿಕ ಪ್ರಭಾವ ಬೀರಿರುವುದು ಕಾಣಬಹುದು. ಈ ಶಾಸ್ತ್ರದ ಅಭ್ಯಾಸ ದಿಂದ ಉತ್ಪಾದಕರ, ಬಳಕೆಗಾರರ, ಮತ್ತು ಕಾರ್ಮಿಕರ ಪರಸ್ಪರ ಸಂಬಂಧ ವನ್ನು ಅಭಿವೃದ್ಧಿಗೊಳಿಸಬಹುದು. ಇಂದಿನ ಬಂಡವಾಳಶಾಯಿ ಪದ್ಧತಿ ಸಮಾಜದಲ್ಲಿ ಈ ಮಾನಸಿಕ ಶಾಸ್ತ್ರದ ಜ್ಞಾನ ಅತೀ ಅವಶ್ಯಕವಾದುದಾಗಿದೆ. ಬಡವ-ಬಲ್ಲಿದ, ಸಾಹುಕಾರ ಮತ್ತು ಕೂಲಿಕಾರ ಎಂಬ ಭೇದವನ್ನು ಹೋಗಲಾಡಿಸುವುದು ಒಂದು ಮುಖ್ಯವಾದ ಸಮಸ್ಯೆಯಾಗಿರುವುದು. ಇಂದಿನ ಸಮಾಜದಲ್ಲಿ ಈ ದಿಶೆಯಲ್ಲಿ ಮುಂದುವರಿಯಲು "ಔದ್ಯೋಗಿಕ ಮಾನಸಶಾಸ್ತ್ರ" (Industrial Psychology) ವೆಂಬ ಒಂದು ವಿಷಯ ಉಂಟಾಗಿರುವುದು. ಇದನ್ನು ನೋಡಿದರೆ ಅರ್ಥಶಾಸ್ತ್ರಕ್ಕೂ ಮತ್ತು ಮಾನಸಿಕ ಶಾಸ್ತ್ರಕ್ಕೂ ಇರುವ ನಿಕಟಸಂಬಂಧ ತಿಳಿಯುವುದು.

### ಅರ್ಥಶಾಸ್ತ್ರ ಮತ್ತು ಸಮಾಜಶಾಸ್ತ್ರ

ಮನುಷ್ಯನು ಮುಖ್ಯವಾಗಿ ಸಮಾಜ ಜೀವಿ. ಮಾನವನು ಸಮಾಜ ದಲ್ಲಿ ಮಾಡುವ ಎಲ್ಲಾ ಬಗೆಯ ಚಟುವಟಿಕೆಗಳು ಸಮಾಜಶಾಸ್ತ್ರದಲ್ಲಿ ಅಡಕವಾಗಿರುವುವು. ಸಮಾಜಶಾಸ್ತ್ರದ ಕ್ಷೇತ್ರ ವೈಶಾಲ್ಯ ಅತೀ ದೊಡ್ಡದು. ಇತರ ಎಲ್ಲಾ ಮಾನವ ಅಭ್ಯಾಸಗಳು ಇದರಲ್ಲಿ ಅಡಕವಾಗಿರುವುವು. ಅರ್ಥ ಶಾಸ್ತ್ರವು ಸಾಮಾಜಿಕ ಶಾಸ್ತ್ರಗಳಲ್ಲಿ ಹೆಚ್ಚಿನ ಪ್ರಾಧಾನ್ಯತೆಯನ್ನು ಪಡೆದಿರುವ ಒಂದು ಶಾಸ್ತ್ರವಾಗಿದೆ. ಸಮಾಜಶಾಸ್ತ್ರ ಮತ್ತು ಅರ್ಥಶಾಸ್ತ್ರಗಳು ಮಾನವ ಜೀವನದ ಕೆಲವು ತತ್ವಗಳ ನಿರ್ಣಯಗಳನ್ನು ಮಾಡುವುದರಿಂದ ಅವುಗಳಲ್ಲಿ

ಪರಸ್ಪರ ನಿಕಟ ಸಂಬಂಧವಿರುವುದು. ಒಂದು ದೇಶದ ಸಾಮಾಜಿಕ ಪ್ರಗತಿ ಅಲ್ಲಿನ ಆರ್ಥಿಕ ಅಭಿವೃದ್ಧಿಯನ್ನು ಅವಲಂಬಿಸಿಕೊಂಡಿರುವುದು.

## ಅರ್ಥಶಾಸ್ತ್ರದ ಪ್ರಾಮುಖ್ಯತೆ

ಅರ್ಥಶಾಸ್ತ್ರವು ಸಮಾಜಶಾಸ್ತ್ರಗಳಲ್ಲಿ ಅತೀ ಮುಖ್ಯವಾದ ಒಂದು ಅಭ್ಯಾಸವಾಗಿರುವುದು. ಪ್ರತಿಯೊಬ್ಬ ನಾಗರಿಕನೂ ಇಂದಿನ ಅರ್ಥಮಯ ಪ್ರಪಂಚದಲ್ಲಿ, ಈ ಶಾಸ್ತ್ರವನ್ನು ಸ್ವಲ್ಪಮಟ್ಟಿಗಾದರೂ ಅಭ್ಯಾಸಮಾಡಿರ ಬೇಕು. ಅರ್ಥಶಾಸ್ತ್ರದಲ್ಲಿ ಅಡಕವಾಗಿರುವ ವಿಷಯಗಳು ಮಾನವನ ಜೀವನದ ಸರ್ವತೋಮುಖವಾದ ಬೆಳವಣಿಗೆಗೆ ಸಂಬಂಧಿಸಿದವುಗಳಾಗಿವೆ. ಇಂದಿನ ಸಮಾಜದ ಆರ್ಥಿಕ ಮುನ್ನಡೆಯನ್ನು ತಿಳಿಯಬೇಕಾದರೆ ಅರ್ಥಶಾಸ್ತ್ರದ ಜ್ಞಾನ ಅವಶ್ಯಕವಾಗಿ ಬೇಕು. ಪ್ರತಿಯೊಬ್ಬ ವ್ಯಕ್ತಿಯು ಜೀವನವನ್ನು ಸುಧಾರಿತ ರೀತಿಯಲ್ಲಿ ನಡೆಸಿಕೊಂಡುಹೋಗಬೇಕಾದರೆ ಆರ್ಥಿಕ ನಿಯಮಗಳ ಸಾಮಾನ್ಯ ಜ್ಞಾನ ಮತ್ತು ಆರ್ಥಿಕ ಸಮಸ್ಯೆಗಳ ಅರಿವು ಇರಲೇಬೇಕಾಗು ವುದು. ಅರ್ಥಶಾಸ್ತ್ರವನ್ನು ಕಲಿಯುವುದರಿಂದ ಇವುಗಳೆಲ್ಲಾ ತಿಳಿಯುವುವು. ಈ ವಿಷಯದ ತಿಳಿವಳಿಕೆಯಿಂದದ ಮನುಷ್ಯನು ತನ್ನ ಜೀವನವನ್ನು ಸುಧಾರಿಸಿದ ರೀತಿಯಲ್ಲಿ ನಡೆಸಿಕೊಂಡುಹೋಗಲು ಸಹಕಾರಿಯಾಗುವುದು. ವ್ಯವಸಾಯ, ಕೈಗಾರಿಕೆ, ವಾಣಿಜ್ಯ ಇವೇ ಮೊದಲಾದ ಹಲವಾರು ಆರ್ಥಿಕೋ ದ್ಯಮಗಳಿಗೆ ಅರ್ಥಶಾಸ್ತ್ರದ ಅಭ್ಯಾಸ ಬಹಳ ಸಹಕಾರಿಯಾಗುವುದು.

ಇಂದಿನ ಪ್ರಪಂಚದಲ್ಲಿ ಎಲ್ಲಾ ರಾಷ್ಟ್ರಗಳ ಕಾರ್ಯ ಚಟುವಟಿಕೆಗಳು ಹೆಚ್ಚುತ್ತಲಿರುವುವು. ಹಲವಾರು ಹೊಸ ನಿಯಮಗಳು ಅರ್ಥಶಾಸ್ತ್ರದಲ್ಲಿ ಕೂಡ ಉದ್ಭವಿಸಿವೆ. ಆರ್ಥಿಕ ಯೋಜನೆಗಳು, ಸಾರ್ವಜನಿಕ ಕಲ್ಯಾಣ, ಇವೇ ಮೊದಲಾದವುಗಳು ಅರ್ಥಶಾಸ್ತ್ರದಲ್ಲಿ ಅಡಕವಾಗಿರುವ ವಿಷಯ ಗಳಾಗಿವೆ. ಆಧುನಿಕ ನಾಗರಿಕನು ಇವುಗಳ ಬಗ್ಗೆ ಸರಿಯಾದ ವಿಚಾರ ತಿಳಿದಿರಬೇಕು. ಇವುಗಳನ್ನು ತಿಳಿಯಬೇಕಾದರೆ ಅರ್ಥಶಾಸ್ತ್ರವನ್ನು ಅಭ್ಯಾಸ ಮಾಡಬೇಕು.

ಮತ್ತು ಜಗತ್ತಿನಲ್ಲಿ ಯಾವ ವಿಷಯವನ್ನಾದರೂ ಶಾಸ್ತ್ರೀಯವಾಗಿ ಕಲಿತರೆ ಬುದ್ಧಿ ಜೀವಿಯಾದ ಮಾನವನಿಗೆ ವಿಷಯ ಜ್ಞಾನ ಲಭಿಸುವುದು.

ಇದರಿಂದ ಮಾನವನ ವ್ಯಕ್ತಿತ್ವ ಬೆಳೆಯಲು ಸಹಕಾರಿಯಾಗುವುದು. ಈ ಬಗೆಯ ಜ್ಞಾನವಿಕಸತೆ ಅರ್ಥಶಾಸ್ತ್ರದ ಅಧ್ಯಯನದಿಂದಲೂ ಉಂಟಾಗುವುದು.

ಕೊನೆಯದಾಗಿ ನಾವು ಇಂದು ಬದುಕಿರುವುದು ನಾಗರಿಕತೆಯ ಶಿಖರವನ್ನು ಮುಟ್ಟಿದ ವೈಜ್ಞಾನಿಕ ಯುಗದಲ್ಲಿ. ಮಾನವ ಜೀವನದ ಮುಖ್ಯ ಗುರಿ ಜೀವನದ ಮಟ್ಟವನ್ನು ಅತೀ ಉನ್ನತ ರೀತಿಯಲ್ಲಿ ನಡೆಸಿಕೊಂಡು ಹೋಗುವುದಾಗಿದೆ. ಇದಕ್ಕೆ ಮುಖ್ಯವಾಗಿ ಬೇಕಾಗಿರುವುದು ಆರ್ಥಿಕ ಸಂಪತ್ತನ್ನು ಅಧಿಕವಾಗಿ ಗಳಿಸುವುದು. ಇಂತಹ ಆರ್ಥಿಕ ಸಂಪತ್ತಿನ ಬಗ್ಗೆ ವಿಷಯಗಳನ್ನು ತಿಳಿಸುವ ಶಾಸ್ತ್ರವೆಂದರೆ ಅರ್ಥಶಾಸ್ತ್ರ. ಆದುದರಿಂದ ಇದರ ಸಾಮಾನ್ಯ ಜ್ಞಾನ ಇಂದು ಪ್ರತಿಯೊಬ್ಬನಿಗೂ ಅತ್ಯವಶ್ಯಕವಾಗಿ ಬೇಕೇಬೇಕು. ಅರ್ಥಶಾಸ್ತ್ರದ ಪ್ರಾಮುಖ್ಯತೆ ಈಗ ಇರುಷ್ಟು ಮಾನವ ಇತಿಹಾಸದ ಯಾವ ಕಾಲದಲ್ಲೂ ಇರಲಿಲ್ಲ.



## ಅಭ್ಯಾಸ 2

# ಅರ್ಥಶಾಸ್ತ್ರದ ಮೂಲಭೂತ ಭಾವನೆಗಳು

### ಸಂಪತ್ತು

ಸಾಮಾನ್ಯವಾಗಿ ಸಂಪತ್ತು ಎಂದರೆ ಹಣವೆಂಬ ಅರ್ಥ ಎಲ್ಲರಲ್ಲಿಯೂ ಉಂಟಾಗುವುದು. ಆದರೆ ಅರ್ಥಶಾಸ್ತ್ರದಲ್ಲಿ ಸಂಪತ್ತು ಎಂಬ ಪದಕ್ಕೆ ಬೇರೆಯೇ ಆದ ವಿವರಣೆ ಇರುವುದು. ಪ್ರಪಂಚದಲ್ಲಿ ದೊರಕುವ ಎಲ್ಲಾ ಬಗೆಯ ಆರ್ಥಿಕ ವಸ್ತುಗಳನ್ನು ಸಂಪತ್ತು ಎಂದು ಕರೆಯಲಾಗುವುದು. ಯಾವ ಯಾವ ವಸ್ತುಗಳಿಗೆ ಉಪಯೋಗ, ವಿರಳತೆ ಮತ್ತು ವಿನಿಮಯ ಗುಣಗಳಿರುತ್ತವೋ ಅಂತಹ ವಸ್ತುಗಳೆಲ್ಲವನ್ನೂ ಸಂಪತ್ತು ಎಂದು ಕರೆಯುವರು. ಪ್ರಕೃತಿಯಲ್ಲಿ ಸಹಜವಾಗಿ ದೊರಕುವ ಗಾಳಿ, ನೀರು, ಬೆಳಕು ಮುಂತಾದವುಗಳು ಹೆಚ್ಚು ಉಪಯೋಗವನ್ನು ಹೊಂದಿದ್ದರೂ ಸಹ ಅವುಗಳನ್ನು ಸಂಪತ್ತು ಎಂದು ಕರೆಯಲಾಗುವುದಿಲ್ಲ. ಏಕೆಂದರೆ ಅವುಗಳು ಪ್ರಕೃತಿಯಲ್ಲಿ ಯಥೇಚ್ಛವಾಗಿ ದೊರಕುವುದರಿಂದ ಅವುಗಳಿಗೆ ವಿರಳತೆ ಮತ್ತು ವಿನಿಮಯ ಗುಣಗಳಿರುವುದಿಲ್ಲ. ಸಂಪತ್ತು ಅಂದರೆ ಕೇವಲ ಆರ್ಥಿಕ ವಸ್ತುಗಳಿಗೆ ಮಾತ್ರ ಅನ್ವಯಿಸದೆ ಒಬ್ಬ ವ್ಯಕ್ತಿಯ ಕಾರ್ಯಕುಶಲತೆ ಮತ್ತು ಯೋಗ್ಯತೆಗಳಿಗೂ ಅನ್ವಯಿಸುವುದು. ಒಂದು ಸ್ಥಳದಲ್ಲಿರುವ, ಮಾನವ ಕ್ಷೇಮಾಭ್ಯುದಯವನ್ನು ಹೆಚ್ಚಿಸುವ ವಸ್ತು ವಿಷಯಗಳಿಗೆ ಸಂಪತ್ತು ಎನ್ನಬಹುದು. ಉದಾ: ಪುಸ್ತಕ ಭಂಡಾರಗಳು, ವಾಚನಾಲಯಗಳು, ಆಟೋಟದ ಮೈದಾನಗಳು, ಶಾಲೆಗಳು, ಆಸ್ಪತ್ರೆಗಳು, ಇವೇ ಮುಂತಾದವುಗಳೆಲ್ಲಾ ಸಂಪತ್ತು ಎನ್ನಿಸುವುದು.

ಒಬ್ಬ ವ್ಯಕ್ತಿಯಲ್ಲಿರುವ ಹಣ, ಆಸ್ತಿ ಮತ್ತು ಇತರ ಐಶ್ವರ್ಯಗಳು ಮತ್ತು ಅವನಲ್ಲಿರುವ ಕುಶಲತೆ–ಇವುಗಳೆಲ್ಲಾ ಆ ವ್ಯಕ್ತಿಯ ಸಂಪತ್ತೆನಿಸುವುದು. ದೇಶದ ಎಲ್ಲಾ ವ್ಯಕ್ತಿಗಳ ಸಂಪತ್ತಿನ ಮೊತ್ತವೇ ರಾಷ್ಟ್ರೀಯ ಸಂಪತ್ತೆನಿಸುವುದು. ಇವಲ್ಲದೆ, ಒಂದು ಸರಕಾರದ ಸಂಪತ್ತಿನಲ್ಲಿ ರೈಲ್ವೆಗಳು, ಅಂಚೆ ಮತ್ತು ತಂತಿ ಸಂಪರ್ಕಗಳು, ರಸ್ತೆಗಳು, ಕೈಗಾರಿಕೆಗಳು, ಮೊದಲಾದವುಗಳೆಲ್ಲಾ ಸೇರುವುವು.

## ಜೀವನದ ಮಟ್ಟ

ಮನುಷ್ಯನು ಜೀವನವನ್ನು ಯಾವ ಸ್ಥಿತಿಯಲ್ಲಿ ನಡೆಸಿಕೊಂಡು ಹೋಗುತ್ತಿದ್ದಾನೆ ಎನ್ನುವುದೇ ಜೀವನದ ಮಟ್ಟವೆಂದಾಗುವುದು. ಒಂದು ದೇಶದ ಜನರ ಜೀವನದ ಮಟ್ಟವನ್ನು ತಿಳಿಯಬೇಕಾದರೆ ಆ ಜನರು ತಮ್ಮ ದೈನಂದಿನ ಜೀವನದಲ್ಲಿ ಬಳಸುವ ವಸ್ತುಗಳನ್ನು ನೋಡಬೇಕು. ಮನುಷ್ಯನು ಉಪಯೋಗಿಸುವ ವಸ್ತುಗಳನ್ನು ಮೂರು ಮುಖ್ಯ ಭಾಗಗಳನ್ನಾಗಿ ವಿಂಗಡಿಸ ಬಹುದು. ಅವುಗಳು ಯಾವುವೆಂದರೆ—

ಅ) ಜೀವನದ ಅವಶ್ಯಕ ವಸ್ತುಗಳು.
ಆ) ಸುಖಸೌಕರ್ಯದ ವಸ್ತುಗಳು.
ಇ) ವಿಲಾಸದ ಅಥವಾ ಭೋಗದ ವಸ್ತುಗಳು.

ಜನರ ಜೀವನದ ಮಟ್ಟವನ್ನು ಅಳೆಯಲು ಈ ಮೂರು ಬಗೆಯ ವಸ್ತುಗಳ ಉಪಯೋಗ ಇರಬೇಕಾಗುವುದು. ಯಾವ ಜನರು ಸುಖ ಸೌಕರ್ಯದಾಯಕ ಮತ್ತು ವಿಲಾಸನೀಯ ವಸ್ತುಗಳನ್ನು ಅಧಿಕವಾಗಿ ಉಪಯೋಗಿಸುವರೋ ಅಂತಹ ಜನರ ಜೀವನದ ಮಟ್ಟ ಉಚ್ಚವಾಗಿರುವುದು ಎಂದು ತಿಳಿಯಬೇಕು. ಯಾವ ಜನರು ಕೇವಲ ಜೀವನಾವಶ್ಯಕ ವಸ್ತುಗಳ ಸಂಪಾದನೆಯಲ್ಲಿಯೇ ನಿರತರಾಗಿರುವರೋ ಅಂಥವರ ಜೀವನದ ಮಟ್ಟ ಸುಧಾರಿಸಿಲ್ಲವೆನ್ನಬಹುದು.

## ರಾಷ್ಟ್ರೀಯ ವರಮಾನ

ಅರ್ಥಶಾಸ್ತ್ರದಲ್ಲಿ ರಾಷ್ಟ್ರೀಯ ವರಮಾನದ ಅಭ್ಯಾಸ ಒಂದು ಮುಖ್ಯ ಭಾಗವಾಗಿದೆ. ಒಂದು ದೇಶದ ಆರ್ಥಿಕ ಪ್ರಗತಿ ಎಷ್ಟರಮಟ್ಟಿಗೆ ಮುಂದುವರಿ ದಿದೆ ಎನ್ನುವುದನ್ನು ಆ ದೇಶದ ರಾಷ್ಟ್ರೀಯ ವರಮಾನವನ್ನು ನೋಡಿದರೆ ತಿಳಿಯುವುದು. ಯಾವುದೇ ದೇಶದ ರಾಷ್ಟ್ರೀಯ ವರಮಾನವನ್ನು ಇಷ್ಟೇ ಎಂದು ನಿರ್ದಿಷ್ಟವಾಗಿ ಹೇಳಲು ಒರುವುದಿಲ್ಲ. ದೇಶದ ಎಲ್ಲ ವ್ಯಕ್ತಿಗಳ ಆದಾಯ, ವ್ಯಾಪಾರಿ ಸಂಸ್ಥೆಗಳ ಆದಾಯ, ಮತ್ತು ಸರಕಾರದ ಆದಾಯ, ಇವುಗಳೆಲ್ಲದರ ಮೊತ್ತ ರಾಷ್ಟ್ರೀಯ ಆದಾಯವಾಗುವುದು. ಭಾರತದ ರಾಷ್ಟ್ರೀಯ ಆದಾಯ ಸಮಿತಿಯು ರಾಷ್ಟ್ರೀಯ ವರಮಾನವನ್ನು ಈ ರೀತಿ

ವಿವರಿಸಿದೆ. ಒಂದು ಗೊತ್ತುಮಾಡಿದ ಕಾಲಾವಧಿಯಲ್ಲಿ ಉಂಟಾಗುವ ಆರ್ಥಿಕ ಮತ್ತು ಸೇವಾವಸ್ತುಗಳ ಮೊತ್ತದ ಎಣಿಕೆಯೇ ರಾಷ್ಟ್ರೀಯ ವರಮಾನವೆಂದಾಗುವುದು. ಅರ್ಥಶಾಸ್ತ್ರಜ್ಞ ಮಾರ್ಷಲನು ಹೇಳಿದಂತೆ ಒಂದು ದೇಶದ ಪ್ರಾಕೃತಿಕ ಸಂಪತ್ತಿನಮೇಲೆ, ಶ್ರಮ ಮತ್ತು ಬಂಡವಾಳದ ಉಪಯೋಗದಿಂದ ಉತ್ಪಾದಿಸಲಾಗುವ ಸರಕು ಮತ್ತು ಸೇವೆಗಳ ಮೊತ್ತದ ಮೌಲ್ಯವೇ ರಾಷ್ಟ್ರೀಯ ವರಮಾನ.

ರಾಷ್ಟ್ರೀಯ ವರಮಾನವನ್ನು ತಿಳಿಯುವುದರಿಂದ ಹಲವಾರು ಪ್ರಯೋಜನಗಳಿವೆ. ಇದರಿಂದ ರಾಷ್ಟ್ರದ ಆರ್ಥಿಕ ಪ್ರಗತಿ ತಿಳಿಯುವುದು. ರಾಷ್ಟ್ರದಲ್ಲಿನ ಜನರ ತಲಾ ವರಮಾನ ಎಷ್ಟಿದೆ ಎಂದು ತಿಳಿಯುವುದು. ಜನರ ಜೀವನದ ಮಟ್ಟ ಹೇಗಿದೆ ಎಂದು ತಿಳಿಯಲು ಸಾಧ್ಯವಾಗುವುದು. ರಾಷ್ಟ್ರೀಯ ಯೋಜನೆಗಳನ್ನು ತಯಾರಿಸಲು ಇದರ ಜ್ಞಾನ ಹೆಚ್ಚು ಅನುಕೂಲವಾಗುವುದು.

## ಬಯಕೆಗಳು ಮತ್ತು ಅವುಗಳ ಪೂರೈಕೆ

ಬಯಕೆಗಳನ್ನು ಮಾನವನ ಅಪೇಕ್ಷೆಗಳೆಂದೂ ಕರೆಯುವರು. ಬಯಕೆಗಳು ಮಾನವನಿಗೆ ಸಹಜವಾದುವುಗಳು. ಜಗತ್ತಿನಲ್ಲಿ ಬಯಕೆಗಳಿಲ್ಲದ ಮನುಷ್ಯನೇ ಇಲ್ಲವೆನ್ನಬಹುದು. ಮನುಷ್ಯನ ಪ್ರಾಪಂಚಿಕ ಹೋರಾಟವೆಲ್ಲಾ ತನ್ನ ಅಪೇಕ್ಷೆಗಳನ್ನು ಪೂರೈಸಲಿಕ್ಕೆ ಮೀಸಲಾಗಿದೆ ಎಂದರೆ ತಪ್ಪಾಗಲಾರದು. ಆದುದರಿಂದ ಬಯಕೆಗಳು ಮತ್ತು ಅವುಗಳ ಪೂರೈಕೆ ಇವೇ ಅರ್ಥಶಾಸ್ತ್ರದ ಮುಖ್ಯ ಅಂಶವಾಗಿರುವುದು.

ಮಾನವನ ಅಪೇಕ್ಷೆಗಳನ್ನು ವಿಶಾಲವಾಗಿ ಎರಡು ಭಾಗಗಳನ್ನಾಗಿ ವಿಂಗಡಿಸಬಹುದು. ಮೊದಲನೆಯದು ಜೀವನಾವಶ್ಯಕ ಬೇಡಿಕೆಗಳು ಮತ್ತು ಎರಡನೆಯದು ಸಾಂಸ್ಕೃತಿಕ ಬಯಕೆಗಳು. ಮನುಷ್ಯನು ಮೊದಲು ತನ್ನ ಜೀವನದ ಅತೀ ಅವಶ್ಯಕವಾದ ಬಯಕೆಗಳನ್ನು ಪೂರೈಸಿಕೊಂಡು ನಂತರ ಸುಖಸೌಕರ್ಯದ ಅಪೇಕ್ಷೆಗಳನ್ನು ಈಡೇರಿಸಲು ಪ್ರಯತ್ನಿಸುವನು. ಇವುಗಳನ್ನು ಸಾಕಷ್ಟು ಪಡೆದನಂತರ ವಿಲಾಸದ ಅಥವಾ ಭೋಗದ ಅವಶ್ಯಕತೆಗಳನ್ನು ಇಚ್ಛಿಸುವನು.

ಮಾನವನ ಜೀವನಾವಶ್ಯಕ ಬಯಕೆಗಳಿಗೆ ಮಿತವಿರುವುದು. ಆದರೆ ಸಾಂಸ್ಕೃತಿಕ ಬಯಕೆಗಳಿಗೆ ಮಿತವಿರುವುದಿಲ್ಲ. ಇವುಗಳ ಪೂರೈಕೆಯ ಶ್ರಮವೇ ಮಾನವ ಜೀವನದ ಹೋರಾಟ.

ಮನುಷ್ಯನ ಬಯಕೆಗಳಿಗೆ ಹಲವಾರು ಲಕ್ಷಣಗಳಿವೆ—

೧. ಬಯಕೆಗಳು ಅಪರಿಮಿತವಾದವುಗಳು. ಮಾನವನ ಎಲ್ಲಾ ಬಯಕೆಗಳನ್ನು ತೃಪ್ತಿಪಡಿಸಲು ಸಾಧ್ಯವಾಗುವುದಿಲ್ಲ. ಏಕೆಂದರೆ ಬಯಕೆಗಳನ್ನು ತೃಪ್ತಿಪಡಿಸುವ ಸಾಧನಮಾರ್ಗಗಳು ಮಿತವಾಗಿರುವುವು.

೨. ಯಾವುದಾದರೂ ಒಂದು ಬಯಕೆಯನ್ನು ತೃಪ್ತಿಪಡಿಸಿದಾಗ ಅದರ ಹಿಂದೆ ಮತ್ತೊಂದು ಬಯಕೆ ಉದ್ಭವಿಸುವುದು.

೩. ಬಯಕೆಗಳು ಅನುಪೂರಕವಾಗಿಯೂ ಮತ್ತು ವಿಕಲ್ಪವಾಗಿಯೂ ಇರುವುವು. ಒಬ್ಬ ವ್ಯಕ್ತಿಗೆ ಪೆನ್ನು ಕೊಂಡುಕೊಳ್ಳುವ ಇಚ್ಛೆಬಂದಾಗ ಅದರೊಡನೆ ಬರೆಯುವ ಮಸಿಯನ್ನು ಕೊಳ್ಳುವ ಇಚ್ಛೆ ಅನುಪೂರಕವಾಗುವುದು. ಒಬ್ಬ ವ್ಯಕ್ತಿ ಹೋಟಲಿನಲ್ಲಿ ಕುಳಿತಾಗ ಒಮ್ಮೆ ದೋಸೆ ತಿನ್ನಲು ಇಚ್ಛಿಸುವನು, ಮತ್ತೊಮ್ಮೆ ಚಪಾತಿ ತಿನ್ನಬೇಕೆಂದೆನಿಸುವುದು, ಮತ್ತೊಮ್ಮೆ ಇಡ್ಲಿ ತಿನ್ನಬೇಕೆಂದು ಇಚ್ಛಿಸುವನು. ಹೀಗೆ ಆತನ ಬಯಕೆಗಳು ವಿಕಲ್ಪವಾಗಿರುವುವು.

೪. ಬಯಕೆಗಳಿಗೆ ಪರಸ್ಪರ ಸ್ಪರ್ಧಿಸುವ ಸ್ವಭಾವವಿರುವುದು. ಒಬ್ಬ ಮನುಷ್ಯನಿಗೆ ಹಲವಾರು ಬಯಕೆಗಳಿರುವುದರಿಂದಲೂ ಮತ್ತು ಎಲ್ಲವನ್ನೂ ಒಂದೇ ಬಾರಿಗೆ ತೃಪ್ತಿಪಡಿಸಲು ಸಾಧ್ಯವಿಲ್ಲದಿರುವುದರಿಂದಲೂ ತನಗೆ ಬೇಕಾದ ಬಯಕೆಯನ್ನು ಆರಿಸಿಕೊಳ್ಳಬೇಕಾಗುತ್ತದೆ. ಓರ್ವ ವ್ಯಕ್ತಿ ಒಂದು ಸಾರಿಗೆ ಒಂದು ಅಪೇಕ್ಷೆಯನ್ನು ಮಾತ್ರ ಪೂರೈಸಿಕೊಳ್ಳಲು ಸಾಧ್ಯವಾಗುವುದು. ಉದಾಹರಣೆಗೆ ಗೋಪಾಲನೆಂಬುವನು ಒಮ್ಮೆ ತನ್ನ ಹಳ್ಳಿಯಿಂದ ಪಕ್ಕದ ನಗರಕ್ಕೆ ಹೋಗುವನು. ಅಲ್ಲಿ ಅವನಿಗೆ ಸಿನಿಮ ನೋಡಬೇಕೆನ್ನಿಸವುದು, ದೊಡ್ಡ ಒಂದು ಹೋಟಲಿನಲ್ಲಿ ಫಲಹಾರ ತೆಗೆದುಕೊಳ್ಳಬೇಕೆಂದೆನ್ನಿಸುವುದು, ತನಗೆ ಒಂದು ಬೆಲೆಬಾಳುವ ಅಂಗಿ ಕೊಳ್ಳಬೇಕೆನ್ನಿಸುವುದು ಇವೇ ಮೊದಲಾಗಿ ಹಲವಾರು ಬಯಕೆಗಳು ಉಂಟಾಗುವುವು. ಆದರೆ ತನ್ನ ಮಿತವಾದ ಹಣ

ದಿಂದ ಈ ಹಲವಾರು ಬಯಕೆಗಳಲ್ಲಿ ಒಂದನ್ನು ಮಾತ್ರ ಪಡೆಯಬಹುದು. ಆಗ ತನಗೆ ಹೆಚ್ಚು ಅವಶ್ಯಕವಿರುವ ಬಯಕೆಯನ್ನು ಆರಿಸಿಕೊಂಡು ಅದನ್ನು ತೃಪ್ತಿಪಡಿಸಿಕೊಳ್ಳುವನು.

೫. ಬಯಕೆಗಳ ಮತ್ತೊಂದು ಲಕ್ಷಣವೆಂದರೆ ಅವುಗಳನ್ನು ತೃಪ್ತಿ ಪಡಿಸಲು ವಿವಿಧ ರೀತಿಗಳಿರುವುವು. ಒಬ್ಬ ವ್ಯಕ್ತಿಗೆ ಬಾಯಾರಿಕೆ ಉಂಟಾದರೆ ಆತನು ಕಾಫಿ, ಚಾ, ಹಾಲು ಅಥವಾ ಬೇರೆ ಯಾವುದಾದರೂ ತಂಪು ಪಾನೀಯವನ್ನು ಸೇವಿಸಿ ತೃಪ್ತಿ ಹೊಂದಬಹುದು.

೬. ಬಯಕೆಗಳು ಪುನರಾವರ್ತಿಸುವುವು ; ಅಂದರೆ ಒಂದೇ ರೀತಿಯ ಬಯಕೆ ಒಬ್ಬನಿಗೆ ಅನೇಕಸಲ ಉಂಟಾಗುವುದು. ಅದನ್ನು ಆಗಾಗ್ಯೆ ತೃಪ್ತಿ ಪಡಿಸಬೇಕಾಗುವುದು. ಈ ರೀತಿ ಒಂದು ಬಯಕೆಯು ಪುನಃ ಪುನಃ ತೃಪ್ತಿ ಹೊಂದುವುದರಿಂದ ಅದು ವ್ಯಕ್ತಿಯಲ್ಲಿ ಅಭ್ಯಾಸವಾಗಿ ಪರಿಣಮಿಸುವುದು. ಉದಾಹರಣೆಗೆ–ತಂಬಾಕು ಸೇವನೆ.

ಒಟ್ಟಿನಲ್ಲಿ ಹೇಳುವುದಾದರೆ ಮಾನವನ ಅಪರಿಮಿತವಾದ ಬಯಕೆ ಗಳನ್ನು ತೃಪ್ತಿಗೊಳಿಸುವ ಹೋರಾಟವೇ ಆರ್ಥಿಕ ಜೀವನದ ತಳಹದಿ ಯಾಗಿರುವುದು.

## ಅನುಭೋಗ

ಅರ್ಥಶಾಸ್ತ್ರದಲ್ಲಿ ಅನುಭೋಗ ಎಂಬುದು ಬಹಳ ಮುಖ್ಯವಾದ ಒಂದು ಭಾಗವಾಗಿರುವುದು. ಅನುಭೋಗವೆಂದರೆ ವಸ್ತುಗಳ ಬಳಸುವಿಕೆ ಯೆಂದಾಗುವುದು. ಸರಕು ಮತ್ತು ಸೇವೆಗಳಿಗೆ ಮಾನವ ಬಯಕೆಗಳನ್ನು ತೃಪ್ತಿಪಡಿಸುವ ಗುಣವಿರುವುದು. ಅದರಿಂದ ಸರಕು ಅಥವಾ ಸೇವೆಗಳ ಉಪ ಯೋಗದಿಂದ ಮನುಷ್ಯನು ತನ್ನ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳ ಬಹುದು. ಇದಕ್ಕೆ ಅನುಭೋಗ ಎನ್ನುವರು.

ಒಂದು ದೇಶದ ಉತ್ಪಾದನೆಯ ಪ್ರಮಾಣವು, ಆದೇಶದ ಅನುಭೋಗ ಪ್ರಮಾಣವನ್ನು ಅವಲಂಬಿಸಿದೆ. ಜನರು ಅನುಭೋಗಿಸುವ ಸರಕು ಮತ್ತು ಸೇವೆಗಳ ಆಧಾರದ ಮೇಲೆ ಜನರ ಜೀವನದ ಮಟ್ಟವನ್ನು ಸಹ ನಿರ್ಧರಿಸ ಬಹುದು. ಒಂದು ದೇಶದ ಉದ್ಯೋಗದ ಪ್ರಮಾಣವು ಕೂಡ ಇದನ್ನೇ ಅವಲಂಬಿಸಿರುವುದು. ಅನುಭೋಗ ಹೆಚ್ಚಾದಾಗ ಉತ್ಪಾದನೆ ಕೂಡ

ಹೆಚ್ಚಾಗುವುದು. ಉತ್ಪಾದನೆ ಅಧಿಕವಾದಾಗ ಜನರ ಆದಾಯ ಹೆಚ್ಚು ವುದು. ಆದಾಯ ಹೆಚ್ಚಿದಂತೆಲ್ಲಾ ಉದ್ಯೋಗ ಕೂಡ ಹೆಚ್ಚುತ್ತದೆ. ಇದೇ ರೀತಿ ಅನುಭೋಗ ಕಡಿಮೆಯಾದಾಗ ಉತ್ಪಾದನೆ ಮತ್ತು ಆದಾಯ ಕಡಿಮೆ ಯಾಗಿ ನಿರುದ್ಯೋಗ ಉಂಟಾಗುತ್ತದೆ. ಈ ರೀತಿ ಅನುಭೋಗಕ್ಕೂ ಮತ್ತು ಉತ್ಪಾದನೆಗೂ ನಿಕಟ ಸಂಬಂಧ ಇರುವುದು.

## ವಿನಿಮಯ

ಹಿಂದಿನ ಕಾಲದಲ್ಲಿ ಮಾನವನು ಉತ್ಪಾದನೆ ಮತ್ತು ಬಳಸುವಿಕೆಯಲ್ಲಿ ಸ್ವಪರಿಪೂರ್ಣನಾಗಿದ್ದ—ಅಂದರೆ ತನಗೆ ಬೇಕಾದ ವಸ್ತುಗಳನ್ನು ತಾನೇ ಉತ್ಪಾದನೆ ಮಾಡಿಕೊಂಡು ಅವುಗಳನ್ನು ತಾನೇ ಸ್ವತಃ ಬಳಸು ತ್ತಿದ್ದನು. ಆದರೆ ಇಂದಿನ ಯಾಂತ್ರಿಕ ಮತ್ತು ಮುಖ್ಯವಾಗಿ ಜನಸಂಖ್ಯೆ ಹೆಚ್ಚಿರುವ ಜಗತ್ತಿನಲ್ಲಿ ಈ ರೀತಿಯ ವೈಯಕ್ತಿಕ ಸ್ವಪರಿಪೂರ್ಣತೆ ಸಾಧ್ಯವಾಗುವುದಿಲ್ಲ. ಈಗ ಒಂದೊಂದು ಕಸುಬಿನ ಜನರು ಒಂದೊಂದು ವಸ್ತುವನ್ನು ತಯಾರಿಸುವರು. ಜನರು ತಮಗೆ ಬೇಕಾದ ವಸ್ತುಗಳನ್ನು ಇತರರಿಂದ ಪಡೆದುಕೊಳ್ಳಬೇಕಾಗುವುದು. ಹೀಗೆ ವಸ್ತುಗಳ ವಿನಿಮಯವೇ ಹಿಂದಿನ ಕಾಲದ ಜನರ ಆರ್ಥಿಕ ಜೀವನದ ಮಾದರಿಯಾಗಿತ್ತು.

ಇಂದಿನ ಕಾಲದಲ್ಲಿ ವಿನಿಮಯವನ್ನು ಮುಖ್ಯವಾಗಿ ಎರಡು ಹಂತ ಗಳಲ್ಲಿ ಮಾಡಬಹುದು. ಮೊದಲನೆಯದು ವಸ್ತುಗಳ ವಿನಿಮಯ ಪದ್ಧತಿ ; ಇದಕ್ಕೆ ಸಾಟಿ ಪದ್ಧತಿಯೆಂದೂ ಹೆಸರಿರುವುದು. ವಿನಿಮಯದ ಎರಡನೆಯ ಕ್ರಮವೆಂದರೆ ಹಣದ ಮೂಲಕ ವಿನಿಮಯ. ಯಾವ ವಸ್ತುವನ್ನಾದರೂ ಹಣವನ್ನು ಕೊಟ್ಟು ಪಡೆಯಬಹುದು ಮತ್ತು ಹಣಕ್ಕಾಗಿ ಕೊಡಬಹುದು.

## ಸ್ಪರ್ಧೆ

ಉತ್ಪಾದನೆ ಹಾಗೂ ವ್ಯಾಪಾರಗಳಲ್ಲಿ ತೊಡಗಿರುವ ಜನರು ತಮ್ಮ ಲಾಭ ಹೆಚ್ಚಿಸಿಕೊಳ್ಳಲು ಪರಸ್ಪರ ಹೋರಾಟ ನಡೆಸುವರು. ಈ ಹೋರಾಟ ವನ್ನು ಪೈಪೋಟಿಯೆಂದು ಕರೆಯುವರು. ಪೈಪೋಟಿ ಇಂದಿನ ಆರ್ಥಿಕ ಜೀವನದ ಬೆನ್ನೆಲುಬು ಎಂದರೆ ಅತಿಶಯೋಕ್ತಿಯಾಗಲಾರದು. ಪೈಪೋಟಿ ಯಲ್ಲಿ ಮುಖ್ಯವಾಗಿ ಎರಡು ವಿಧಗಳಿರುವುವು.

**೧. ಪರಿಪೂರ್ಣ ಪೈಪೋಟಿ.**

**೨. ಅಪರಿಪೂರ್ಣ ಪೈಪೋಟಿ.**

ಒಂದು ಮಾರುಕಟ್ಟೆಯಲ್ಲಿ ಪರಿಪೂರ್ಣ ಪೈಪೋಟಿಯಿರಬೇಕಾದರೆ ಈ ಕೆಳಗಿನ ಅಂಶಗಳು ಅವಶ್ಯಕವಾಗಿ ಇರಬೇಕು.

೧. ಬೇಡುವವರ ಮತ್ತು ಪೂರೈಕೆದಾರರ ಸಂಖ್ಯೆಯು ಅಧಿಕವಾಗಿರಬೇಕು.

೨. ಮಾರುಕಟ್ಟೆಯಲ್ಲಿ ವಸ್ತುವು ಸಮರೂಪದಲ್ಲಿರಬೇಕು. ವಸ್ತುವಿನ ಎಲ್ಲ ಪ್ರಮಾಣಗಳೂ ಮತ್ತು ಗುಣಗಳೂ ಸಮವಾಗಿರಬೇಕು. ಅವುಗಳಲ್ಲಿ ಯಾವ ಬಗೆಯ ವ್ಯತ್ಯಾಸಗಳು ಇರಬಾರದು.

೩. ಮಾರುಕಟ್ಟೆಯಲ್ಲಿ ವಸ್ತುವಿಗೆ ಒಂದೇ ಬೆಲೆಯಿರಬೇಕು. ಇದರಿಂದ ಮಾರುವವರು ಯಾರಿಗೆ ಬೇಕಾದರೂ ಮಾರಬಹುದು ಮತ್ತು ಕೊಳ್ಳುವವರು ಯಾರಿಂದ ಬೇಕಾದರೂ ಕೊಳ್ಳಬಹುದು.

೪. ವಸ್ತುಗಳ ಬೆಲೆ ಎಷ್ಟು ಎಂಬುದು ಪ್ರತಿಯೊಬ್ಬನಿಗೂ ಮೊದಲೇ ತಿಳಿದಿರಬೇಕು. ವಸ್ತುಗಳನ್ನು ಯಾರ್ಯಾರು ಯಾವ ಯಾವ ಬೆಲೆಗೆ ಮಾರುತ್ತಿದ್ದಾರೆ ಎಂಬ ಅರಿವು ಎಲ್ಲರಿಗೂ ಇರಬೇಕು.

ಪರಿಪೂರ್ಣ ಪೈಪೋಟಿಯಿರುವ ಮಾರುಕಟ್ಟೆಯಲ್ಲಿ ಒಂದೇ ರೀತಿಯ ವಸ್ತುವಿಗೆ ಒಂದು ಬೆಲೆ ಮಾತ್ರ ಇರುತ್ತದೆ. ಇದರಿಂದ ಹಲವಾರು ಪ್ರಯೋಜನಗಳು ಇರುವುವು. ಪೈಪೋಟಿಯ ಮೂಲಕ ಬಳಕೆದಾರರು ಹೆಚ್ಚು ಪ್ರಯೋಜನ ಹೊಂದಬಹುದು. ಕಡಿಮೆ ಬೆಲೆಯಲ್ಲಿ ಒಳ್ಳೆಯ ಪದಾರ್ಥಗಳನ್ನು ಉತ್ಪಾದಕರು ತಯಾರಿಸಲು ಪ್ರಯತ್ನಿಸುವರು.

ನಮ್ಮ ನಿತ್ಯ ಜೀವನದಲ್ಲಿ ಯಾವಾಗಲೂ ಪರಿಪೂರ್ಣ ಪೈಪೋಟಿಯಿರಲು ಸಾಧ್ಯವಿಲ್ಲ. ಎಲ್ಲಿ ನೋಡಿದರೂ ಅಪರಿಪೂರ್ಣ ಪೈಪೋಟಿಯೇ ಕಂಡುಬರುತ್ತಿದೆ. ಅಪರಿಪೂರ್ಣ ಪೈಪೋಟಿಯು ಕೂಡ ಕೆಲವು ಲಕ್ಷಣಗಳಿಂದ ಕೂಡಿರುವುದು. ಮುಖ್ಯವಾದವುಗಳೆಂದರೆ—

೧. ಮಾರುಕಟ್ಟೆಯಲ್ಲಿ ಒಂದೇ ಬಗೆಯ ವಸ್ತುವಿನಲ್ಲಿ ನಿಜವಾದ ಅಥವಾ ಕಲ್ಪಿಸಿಕೊಂಡ ವ್ಯತ್ಯಾಸಗಳು ಇರುವುವು.

೨. ವಸ್ತುಗಳ ತಯಾರಕರು ತಮ್ಮ ವಸ್ತುಗಳ ಶ್ರೇಷ್ಠತೆಯ ಬಗ್ಗೆ ಪ್ರಚಾರಮಾಡಿ ಅವುಗಳಿಗೆ ಹೆಚ್ಚು ಗಿರಾಕಿಗಳನ್ನು ಸಂಪಾದಿಸಲು ಪ್ರಯತ್ನಿಸುವರು.

೩. ಮಾರಾಟಗಾರರು ವಸ್ತುಗಳನ್ನು ಕೊಂಡುಕೊಳ್ಳುವವರಿಗೆ ಹಲವಾರು ಸೌಕರ್ಯಗಳನ್ನು ಒದಗಿಸಿಕೊಡುವರು. ಮುಖ್ಯವಾಗಿ ವಸ್ತುಗಳನ್ನು ಸಾಲಕೊಡುವುದು, ಬಳಕೆದಾರನ ಮನೆಗೇ ವಸ್ತುಗಳನ್ನು ತಲುಪಿಸುವುದು, ಇವೇ ಮೊದಲಾದ ಸೌಲಭ್ಯಗಳನ್ನು ಕೊಡುವರು.

೪. ಅಪರಿಪೂರ್ಣ ಪೈಪೋಟಿಯಲ್ಲಿ ಕೊಳ್ಳುವವರಿಗೆ ಮಾರುಕಟ್ಟೆಯ ತಿಳಿವಳಿಕೆ ಏನೂ ಇರುವುದಿಲ್ಲ.

೫. ಮಾರುವವರ ಮತ್ತು ಕೊಳ್ಳುವವರ ಸಂಖ್ಯೆ ಕಡಿಮೆಯಿದ್ದಾಗ ಅಪರಿಪೂರ್ಣ ಪೈಪೋಟಿಯುಂಟಾಗುವುದು.

ಒಟ್ಟಿನಲ್ಲಿ ಹೇಳುವುದಾದರೆ ಯಾವಕಡೆ ಒಂದೇ ಮಾರುಕಟ್ಟೆಯಲ್ಲಿ ಒಂದು ಬಗೆಯ ವಸ್ತುವಿಗೆ ಬೇರೆ ಬೇರೆ ಬೆಲೆಗಳು ಇರುತ್ತವೋ, ಅಲ್ಲಿನ ಪೈಪೋಟಿ ಅಪರಿಪೂರ್ಣವೆನಿಸುವುದು.

### ಏಕಸ್ವಾಮ್ಯತೆ

ಜಗತ್ತಿನಲ್ಲಿ ಎಲ್ಲಾ ಕಡೆಗಳಲ್ಲಿ ಅಪರಿಪೂರ್ಣ ಪೈಪೋಟಿಯೇ ಕಂಡು ಬರುತ್ತಿದೆ. ಇಂತಹ ಸ್ಥಿತಿಯಲ್ಲಿ ಒಂದು ವಸ್ತುವಿನ ಸಂಪೂರ್ಣ ಹತೋಟಿಯನ್ನು ಒಬ್ಬ ವ್ಯಕ್ತಿ ಅಥವಾ ಒಂದು ಸಂಸ್ಥೆ ತನ್ನ ವಶದಲ್ಲಿಟ್ಟುಕೊಳ್ಳಬಹುದು. ಅಂತಹ ಸ್ಥಿತಿಗೆ ಏಕಸ್ವಾಮ್ಯ ಎನ್ನುತ್ತೇವೆ. ಏಕಸ್ವಾಮ್ಯ ಯಾವಾಗಲೂ ಪರಿಪೂರ್ಣ ಪೈಪೋಟಿಯ ವಿರೋಧವಾದ ಸ್ಥಿತಿ. ಈ ರೀತಿಯ ಏಕಸ್ವಾಮ್ಯತೆಯನ್ನು ಹೊಂದಿರುವ ವ್ಯಕ್ತಿ ಅಥವಾ ಸಂಸ್ಥೆಗೆ ಪದಾರ್ಥಗಳ ಬೆಲೆಯನ್ನು ನಿರ್ಧರಿಸುವ ಹಕ್ಕು ಇರುತ್ತದೆ. ಅಲ್ಲದೆ ತನ್ನ ಸರಕುಗಳ ಸರಬರಾಯಿಯ ಪ್ರಮಾಣವನ್ನು ಕೂಡ ನಿರ್ಧಾರ ಮಾಡುವ ಶಕ್ತಿ ಇರುತ್ತದೆ.

ಏಕಸ್ವಾಮ್ಯತೆಯನ್ನು ಮುಖ್ಯವಾಗಿ ಮೂರು ಭಾಗಗಳನ್ನಾಗಿ ವಿಂಗಡಿಸಬಹುದು.

೧) ಸಮಾಜದ ಹಿತದೃಷ್ಟಿಯಿಂದ ಏಕಸ್ವಾಮ್ಯತೆಯನ್ನು ಸರಕಾರವು ಒಬ್ಬ ವ್ಯಕ್ತಿಗೆ ಅಥವಾ ಒಂದು ಸಂಸ್ಥೆಗೆ ಕೊಟ್ಟರೆ ಅದಕ್ಕೆ ಸಾಮಾಜಿಕ ಏಕ ಸ್ವಾಮ್ಯತೆ ಎನ್ನುವರು. ಉದಾ :— ಬೇರೆ ಬೇರೆ ಔಷಧಿಗಳನ್ನು ತಯಾರು ಮಾಡುವ ಹಕ್ಕನ್ನು ಸರಕಾರವು ಬೇರೆ ಬೇರೆ ಕಂಪೆನಿಗಳಿಗೆ ಕೊಡುವುದು ಈ ಉದ್ದೇಶದಿಂದಲೇ ಆಗಿರುವುದು.

೨) ಒಂದು ದೇಶದಲ್ಲಿ ತನ್ನದೇ ಆದ ಕೆಲವು ಪ್ರಾಕೃತಿಕ ಸಂಪತ್ತು ಗಳಿದ್ದರೆ ಅವುಗಳ ಮೇಲೆ ಆ ದೇಶಕ್ಕೆ ಸ್ವಾಮ್ಯತೆಯಿರುವುದು. ಇದನ್ನು ಪ್ರಾಕೃತಿಕ ಸ್ವಾಮ್ಯತೆಯೆಂದು ಕರೆಯುವರು. ಉದಾ :— ಬಂಗಾಳ ರಾಜ್ಯಕ್ಕೆ ಸೆಣಬಿನ ಮೇಲೆ ಸ್ವಾಮ್ಯತೆ-ಆಫ್ರಿಕಕ್ಕೆ ವಜ್ರಗಳಲ್ಲಿ ಸ್ವಾಮ್ಯತೆ-ಮುಂತಾದುವುಗಳಾಗಿವೆ.

೩) ಆರ್ಥಿಕ ದೃಷ್ಟಿಯಿಂದ ಉತ್ಪನ್ನ ಸಂಸ್ಥೆಯ ಪ್ರಮಾಣ ಹೆಚ್ಚು ವುದರಿಂದ ಒಟ್ಟು ಉತ್ಪನ್ನವು ಒಂದು ಅಥವಾ ಹಲವು ಸಂಸ್ಥೆಗಳ ಹತೋಟಿ ಯಲ್ಲಿರುವುದು. ಇದಕ್ಕೆ ಆರ್ಥಿಕ ಸ್ವಾಮ್ಯತೆ ಎಂದು ಕರೆಯುವರು.

ಅಭ್ಯಾಸ ೩

# ಉತ್ಪಾದನೆಯ ಅಂಶಗಳು

ಒಂದು ದೇಶದಲ್ಲಿ ವಸ್ತುಗಳ ಉತ್ಪಾದನೆ ಹಲವಾರು ಅಂಶಗಳನ್ನು ಹೊಂದಿಕೊಂಡಿರುವುದು. ಬಂಡವಾಳ ಮತ್ತು ಶ್ರಮಶಕ್ತಿಯಿದ್ದರೆ ಯಾವ ವಸ್ತುವನ್ನಾದರೂ ಉತ್ಪಾದನೆ ಮಾಡಬಹುದೆಂದು ಒಂದು ಕಾಲದಲ್ಲಿ ತಿಳಿಯಲಾಗಿತ್ತು. ಆ ಕಾಲದಲ್ಲಿ ಬಂಡವಾಳವೆಂದರೆ ಅದರಲ್ಲಿ ಎಲ್ಲ ಬಗೆಯ ಪ್ರಾಕೃತಿಕ ಸಾಧನಗಳು ಮತ್ತು ಶ್ರಮಶಕ್ತಿಯೆಂದರೆ ದೈಹಿಕ ಶ್ರಮ ಮತ್ತು ವ್ಯವಸ್ಥಾಪಕತ್ವ ಇವೆರಡೂ ಅಡಗಿದ್ದುವು. ಆದರೆ ಇಂದು ಅರ್ಥಶಾಸ್ತ್ರದಲ್ಲಿ ಉತ್ಪಾದನೆಯ ಅಂಶಗಳನ್ನು ಮುಖ್ಯವಾದ ನಾಲ್ಕು ಭಾಗಗಳನ್ನಾಗಿ ವಿಂಗಡಿಸಿರುವರು. ಅವುಗಳು ಯಾವುವೆಂದರೆ (೧) ಭೂಮಿ (೨) ಶ್ರಮಶಕ್ತಿ (೩) ಬಂಡವಾಳ ಮತ್ತು (೪) ವ್ಯವಸ್ಥಾಪಕತ್ವ ಅಥವಾ ಸಂಘಟನೆ. ಹಿಂದಿನ ಕಾಲದಲ್ಲಿ ಉತ್ಪಾದನೆಯು ಪ್ರಕೃತಿ ಸಂಪತ್ತು ಮತ್ತು ಶ್ರಮ ಇವೆರಡರಿಂದಲೇ ಆಗುತ್ತಿತ್ತು. ಆದರೆ ಇಂದು ಇವುಗಳೆರಡರೊಂದಿಗೆ ಬಂಡವಾಳ ಮತ್ತು ಸಂಘಟನೆ ಸೇರಿರುವುದು.

## (೧) ಭೂಮಿ

ಅರ್ಥಶಾಸ್ತ್ರದಲ್ಲಿ ಭೂಮಿ ಎಂಬ ಪದಕ್ಕೆ ವಿಶೇಷ ಅರ್ಥ ಇರುವುದು. ಪ್ರಪಂಚದ ಎಲ್ಲಾ ನೈಸರ್ಗಿಕ ಸಂಪತ್ತುಗಳನ್ನು ಅರ್ಥಶಾಸ್ತ್ರದಲ್ಲಿ ಭೂಮಿ ಎಂದು ಕರೆಯುವರು. 'ಭೂಮಿ' ಎಂಬ ಪದದಲ್ಲಿ ನೆಲ, ಹವಾಮಾನ, ನದಿ, ಅರಣ್ಯ, ಪರ್ವತ ಮುಂತಾದ ಎಲ್ಲ ನೈಸರ್ಗಿಕ ವಸ್ತುಗಳು ಅಡಗಿವೆ. ಅರ್ಥಶಾಸ್ತ್ರದಲ್ಲಿನ ಭೂಮಿ ಹಲವಾರು ಲಕ್ಷಣಗಳನ್ನು ಹೊಂದಿರುವುದು.

೧. ಭೂಮಿಯ ವಿಸ್ತೀರ್ಣವು ನಿರ್ದಿಷ್ಟವಾದುದಾಗಿದೆ. ಇದರ ಪೂರೈಕೆಯನ್ನು ಹೆಚ್ಚು ಕಡಿಮೆಮಾಡಲು ಸಾಧ್ಯವಾಗುವುದಿಲ್ಲ. ಆದುದರಿಂದ ನಿರ್ದಿಷ್ಟ ಪ್ರಮಾಣದಲ್ಲಿರುವ ಭೂಮಿಯಲ್ಲಿ ಮನುಷ್ಯ ಪ್ರಯತ್ನದಿಂದ ಉತ್ಪತ್ತಿಯನ್ನು ಹೆಚ್ಚಿಸಬಹುದು. ಪಾಳುಬಿದ್ದ ಬಂಜರು ಭೂಮಿಯನ್ನು ಕೂಡ ಇಂದು ಅನೇಕ ವೈಜ್ಞಾನಿಕ ಪ್ರಯೋಗಗಳಿಂದ ಸುಗಮವಾಗಿ ಮತ್ತು ಫಲವತ್ತಾಗಿ ಮಾಡಿಕೊಳ್ಳಬಹುದು.

೨. ಭೂಮಿ ಪ್ರಕೃತಿಯ ಕೊಡುಗೆ. ಇದರಿಂದ ಅದನ್ನು ಉತ್ಪಾದನೆ ಮಾಡುವ ಖರ್ಚು ಇರುವುದಿಲ್ಲ.

೩. ಭೂಮಿಯ ಫಲವತ್ತತೆಯಲ್ಲಿ ಮತ್ತು ಉಪಯೋಗದಲ್ಲಿ ಭಿನ್ನತೆಯಿರುವುದು. ಎಲ್ಲಾ ಭೂಮಿಯ ಗುಣಗಳು ಒಂದೇಸಮನಾಗಿರುವುದಿಲ್ಲ. ಕೆಲವು ಸ್ಥಳ ಅಧಿಕ ಫಲವತ್ತತೆಯಿಂದಲೂ ಮತ್ತು ಇನ್ನು ಕೆಲವು ಕಡಿಮೆ ಫಲವತ್ತತೆಯಿಂದಲೂ, ಕೂಡಿರುತ್ತವೆ. ಜನಸಂಖ್ಯೆ ಹೆಚ್ಚಿದಂತೆಲ್ಲಾ ಕಡಿಮೆ ಫಲವತ್ತತೆಯ ಭೂಮಿಯನ್ನು ಕೂಡ, ಕ್ರಮವಾಗಿ ಬೇಸಾಯಕ್ಕನುಗುಣವಾಗಿ ಮಾಡುವ ಪ್ರಸಂಗ ಬರುವುದು.

## (೨) ಶ್ರಮಶಕ್ತಿ

ಹಣವನ್ನು ಸಂಪಾದನೆ ಮಾಡುವ ಅಪೇಕ್ಷೆಯನ್ನಿಟ್ಟುಕೊಂಡು ಕೈಗೊಳ್ಳುವ ಎಲ್ಲಾ ಮಾನವನ ಶಾರೀರಿಕ ಮತ್ತು ಬೌದ್ಧಿಕ ಪ್ರಯತ್ನಗಳಿಗೆ ಶ್ರಮ ಎಂದು ಹೇಳುತ್ತೇವೆ. ಕಾರ್ಖಾನೆಗಳಲ್ಲಿಯಾಗಲೀ, ವ್ಯವಸಾಯದಲ್ಲಾಗಲೀ, ಶೈಕ್ಷಣಿಕ ಸಂಸ್ಥೆಗಳಲ್ಲಾಗಲಿ, ಮತ್ತು ಇತರ ಯಾವುದೇ ಕ್ಷೇತ್ರದಲ್ಲಿಯ ಹಣವನ್ನು ಗಳಿಸಲು ಮನುಷ್ಯರು ಸತತವಾಗಿ ಶ್ರಮಿಸುವರು. ಈ ರೀತಿಯ ಶ್ರಮವು ಕೂಡ ಉತ್ಪಾದನೆಯ ಒಂದು ಸಾಧನವೆಂದಾಗ, ಅದರಲ್ಲಿ ಹಲವಾರು ಲಕ್ಷಣಗಳನ್ನು ಕಾಣಬಹುದು.

೧. ಮನುಷ್ಯನ ಶ್ರಮಶಕ್ತಿಯನ್ನು ಅವನಿಂದ ಬೇರ್ಪಡಿಸಲು ಸಾಧ್ಯವಾಗುವುದಿಲ್ಲ. ಒಬ್ಬ ವ್ಯಕ್ತಿಯು ತನ್ನ ಶ್ರಮಶಕ್ತಿಯನ್ನು ಮಾರಿದರೂ ಕೂಡ, ಅದರ ಗುಣ ಅವನಲ್ಲಿಯೇ ಉಳಿಯುತ್ತದೆ.

೨. ಶ್ರಮಶಕ್ತಿಯು ಯಾವಾಗಲೂ ನಾಶಯುಕ್ತವಾಗಿರುತ್ತದೆ. ಅದನ್ನು ಸಕಾಲಕ್ಕೆ ಸರಿಯಾಗಿ ಉಪಯೋಗ ಮಾಡಿಕೊಳ್ಳದಿದ್ದರೆ ಅದು ವ್ಯರ್ಥವಾಗಿಬಿಡುವುದು. ಒಂದು ಸಮಯದಲ್ಲಿ ಉಪಯೋಗಿಸಲಾಗದ ಶ್ರಮಶಕ್ತಿಯನ್ನು ಮತ್ತೊಂದು ಸಮಯದಲ್ಲಿ ಉಪಯೋಗಿಸಲು ಬರುವುದಿಲ್ಲ. ಸಮಯ ಕಳೆದಂತೆಲ್ಲಾ ಉಪಯೋಗಿಸದೆ ಉಳಿದ ಶ್ರಮಶಕ್ತಿ ವ್ಯರ್ಥವಾಗಿ ಬಿಡುವುದು.

೨. ಶ್ರಮ ಶಕ್ತಿಯು ಎಲ್ಲಾ ವಸ್ತುಗಳ ಉತ್ಪಾದನೆಗೆ ಪ್ರಮುಖ ಸಾಧನವಾಗಿರುವುದು.

೪. ಶ್ರಮಶಕ್ತಿಯು ಯಾವಾಗಲೂ ಜನಸಂಖ್ಯೆಯ ಪ್ರಮಾಣ ಮತ್ತು ಜನರ ಕಾರ್ಯ ತರಬೇತಿಗಳನ್ನು ಹೊಂದಿಕೊಂಡಿರುತ್ತದೆ.

೫. ಶ್ರಮಿಕರು ಬುದ್ಧಿ ಶಕ್ತಿ ಮತ್ತು ವಿವೇಚನೆಯನ್ನು ಹೊಂದಿರುತ್ತಾರೆ. ಇಂತಹ ಲಕ್ಷಣಗಳು ಭೂಮಿ ಮತ್ತು ಬಂಡವಾಳದಲ್ಲಿ ಕಂಡು ಬರುವುದಿಲ್ಲ.

**ಜನಸಂಖ್ಯೆಯ ಸಿದ್ಧಾಂತ :**

ಒಂದು ರಾಷ್ಟ್ರದಲ್ಲಿನ ಶ್ರಮಶಕ್ತಿಯು ಯಾವಾಗಲೂ ಆ ರಾಷ್ಟ್ರದ ಜನಸಂಖ್ಯೆ ಮತ್ತು ಕಾರ್ಯ ದಕ್ಷತೆಯನ್ನು ಅವಲಂಬಿಸಿರುವುದು. ಕಾರ್ಯದಕ್ಷತೆಯಿಂದ ಕೂಡಿದ ಹೆಚ್ಚು ಜನರಿರುವ ದೇಶದಲ್ಲಿ ಸಂಪತ್ತು ಹೆಚ್ಚುವುದು. ಶ್ರಮಶಕ್ತಿಯ ಪ್ರಮಾಣ ಸಾಧಾರಣವಾಗಿ ಜನಸಂಖ್ಯೆಯಿಂದ ನಿರ್ಧರಿಸಲ್ಪಡುತ್ತದೆ. ಒಂದು ದೇಶದ ಶ್ರಮ ಶಕ್ತಿಯನ್ನು ಅಳೆಯುವಾಗ ಆ ದೇಶದ ಒಟ್ಟು ಜನಸಂಖ್ಯೆಯನ್ನು ತೆಗೆದುಕೊಳ್ಳಲಾಗುವುದಿಲ್ಲ. ಮಕ್ಕಳು, ವಿದ್ಯಾರ್ಥಿಗಳು, ವೃದ್ಧರು ಮತ್ತು ರೋಗಿಗಳು ಇವರೆಲ್ಲಾ ಶ್ರಮಶಕ್ತಿಯಿಂದ ಹೊರಗಿರುವಂತವರು.

ಅರ್ಥಶಾಸ್ತ್ರದಲ್ಲಿ ಜನಸಂಖ್ಯೆಯ ಸಿದ್ಧಾಂತವನ್ನು ನಿರೂಪಿಸಿದ ತಜ್ಞರಲ್ಲಿ ಪ್ರಮುಖರಾದವರೆಂದರೆ ರಾಬರ್ಟ್ ಮಾಲ್ತಸ್ ಮತ್ತು ಕೇನನ್ ಎಂಬವರು. ಥಾಮಸ್ ರಾಬರ್ಟ್ ಮಾಲ್ತಸನು ೧೭೯೮ರಲ್ಲಿ ಜನಸಂಖ್ಯೆಯ ಬಗ್ಗೆ ಒಂದು ಸಿದ್ಧಾಂತವನ್ನು ಮುಂದಿಟ್ಟನು. ಅದರ ಪ್ರಕಾರ ಒಂದು ದೇಶದ ಜನಸಂಖ್ಯೆಯು ಆ ದೇಶದ ಜೀವನೋಪಾಯ ಸಾಧನಗಳ ಪ್ರಮಾಣವನ್ನು ಅವಲಂಬಿಸಿರುತ್ತದೆ. ಎಂದರೆ ದೇಶದ ಜನಸಂಖ್ಯೆಯ ಪ್ರಮಾಣವು, ಆ ದೇಶದಲ್ಲಿ ದೊರಕುವ ಆಹಾರ ಸಾಮಗ್ರಿಗಳನ್ನು ಹೊಂದಿಕೊಂಡಿರುತ್ತದೆ. ಜನಸಂಖ್ಯೆ ಮತ್ತು ಆಹಾರೋತ್ಪತ್ತಿಯ ಸಾಧನಗಳು ಕಾಲ ಹೋದಂತೆಲ್ಲಾ ಅಧಿಕವಾಗುತ್ತಾ ಹೋಗುತ್ತವೆ. ಆದರೆ ಅವೆರಡು ಒಂದೇ ಪ್ರಮಾಣದಲ್ಲಿ ಹೆಚ್ಚುವುದಿಲ್ಲ. ಮಾಲ್ತಸನ ಹೇಳಿಕೆಯಂತೆ ಜನಸಂಖ್ಯೆಯು ಯಾವಾಗಲೂ

ಭೂಮಿತಿ ವೇಗದಲ್ಲಿ ಅಂದರೆ ೨, ೪, ೮, ೧೬, ೩೨ ಈ ಗತಿಯಲ್ಲಿ ಅಧಿಕ ವಾಗುತ್ತದೆ. ಆಹಾರೋತ್ಪತ್ತಿ ಅಂಕಗಣಿತದ ವೇಗದಲ್ಲಿ ಅಂದರೆ ೨, ೩, ೪, ೫, ೬–ಹೀಗೆ ಹೆಚ್ಚುತ್ತದೆ. ಎರಡನೆಯದಾಗಿ ಮಾಲ್ತುಸನ ಸಿದ್ಧಾಂತದ ಪ್ರಕಾರ ಜನಸಂಖ್ಯೆಯು ಪ್ರತಿ ಇಪ್ಪತ್ತೈದು ವರ್ಷಗಳಿಗೊಮ್ಮೆ ದ್ವಿಗುಣ ವಾಗುವುದು.

ಹೀಗಿರುವುದರಿಂದ ಎಲ್ಲಾ ದೇಶಗಳಲ್ಲೂ ಜನಸಂಖ್ಯೆ ಅಲ್ಲಿನ ಆಹಾ ರೋತ್ಪತ್ತಿ ಪ್ರಮಾಣಕ್ಕಿಂತ ಹೆಚ್ಚಾಗಿಯೇ ಇರುವುದು. ಇದರಿಂದಲೇ ದೇಶ ಗಳಲ್ಲಿ ಅಧಿಕ ಜನಸಂಖ್ಯೆಯುಂಟಾಗಿ ಬಡತನ ಮತ್ತು ದಾರಿದ್ರ್ಯ ತಲೆ ದೋರುವುದು.

ಈ ರೀತಿಯಿರುವ ಜನಸಂಖ್ಯೆಯ ಏರಿಕೆಯನ್ನು ತಡೆಗಟ್ಟಲು ಹಲ ವಾರು ಪ್ರತಿಬಂಧನಗಳನ್ನು ಮಾಲ್ತಸ್ತನು ಸೂಚಿಸಿರುವನು. ದೇಶದಲ್ಲಿ ಜನ ಸಂಖ್ಯೆ ಹೆಚ್ಚಿದಂತೆಲ್ಲಾ ಅನೇಕ ವಿಷಮ ಸಮಸ್ಯೆಗಳು ಉದ್ಭವಿಸುವುವು. ದಾರಿದ್ರ್ಯ ಮತ್ತು ರೋಗರುಜಿನಗಳು ಎಲ್ಲೆಲ್ಲೂ ಉಂಟಾಗುವುವು. ಇವಲ್ಲದೆ ಅತಿವೃಷ್ಟಿ, ಅನಾವೃಷ್ಟಿ, ಭೂಕಂಪಗಳು, ಯುದ್ಧಗಳು ಮೊದಲಾದ ಹಲ ವಾರು ಪ್ರಾಕೃತಿಕ ಪ್ರತಿಬಂಧನಗಳಿಂದ ಜನಸಂಖ್ಯೆ ಕಡಿಮೆಯಾಗಿ ಆಹಾ ರೋತ್ಪತ್ತಿಯ ಪ್ರಮಾಣದ ಮಟ್ಟಕ್ಕೆ ಇಳಿಯುವುದು. ಈ ರೀತಿಯ ನೈಸರ್ಗಿಕ ಪ್ರತಿಬಂಧನಗಳೊಟ್ಟಿಗೆ ಮನುಷ್ಯನು ಕೆಲವು ಸ್ವಯಂಪ್ರತಿಬಂಧನ ಗಳನ್ನು ಆಚರಣೆಯಲ್ಲಿ ತಂದು ಜನಸಂಖ್ಯೆಯ ಹೆಚ್ಚಳವನ್ನು ತಡೆಗಟ್ಟ ಬಹುದು. ಇವುಗಳಲ್ಲಿ ಮುಖ್ಯವಾದವುಗಳೆಂದರೆ ತಡವಾದ ವಿವಾಹ, ಬ್ರಹ್ಮ ಚರ್ಯಪರಿಪಾಲನೆ, ಆತ್ಮಸಂಯಮ ಮತ್ತು ಕುಟುಂಬ ಯೋಜನೆಗಳನ್ನು ಅನುಸರಿಸುವುದು. ಇವುಗಳ ಪರಿಪಾಲನೆಯಿಂದ ಜನಸಂಖ್ಯೆ ಯಾವಾಗಲೂ ಒಂದು ಮಿತಿಯಲ್ಲಿರುವುದು.

**ಮಾಲ್ತಸನ ಸಿದ್ಧಾಂತದ ಲೋಪದೋಷಗಳು :**

ರಾಬರ್ಟ್ ಮಾಲ್ತುಸನು ನಿರೂಪಿಸಿರುವ ಜನಸಂಖ್ಯೆಯ ಸಿದ್ಧಾಂತ ವನ್ನು ಅನೇಕ ಅರ್ಥಶಾಸ್ತ್ರಜ್ಞರು ಕಟುವಾಗಿ ಟೀಕಿಸಿದ್ದಾರೆ.

ಮೊದಲನೆಯದಾಗಿ ಮಾಲ್ತಸನು ಹೇಳಿದಂತೆ—ಜನಸಂಖ್ಯೆ ಭೂಮಿ ತಿಯ ಪ್ರಮಾಣದಲ್ಲೂ ಮತ್ತು ಆಹಾರೋತ್ಪತ್ತಿ ಗಣಿಕೆಯ ಪ್ರಮಾಣದಲ್ಲೂ

ಅಧಿಕವಾಗುವುದು—ಎಂಬುದು ಸರಿಯಲ್ಲವೆಂದು ಅನೇಕರು ವಾದಿಸಿದರು. ಏಕೆಂದರೆ ಇಂದಿನ ವೈಜ್ಞಾನಿಕ ಯುಗದಲ್ಲಿ ಶಾಸ್ತ್ರೀಯ ಬೇಸಾಯ ಕ್ರಮ ವನ್ನು ಅನುಸರಿಸಿ ಬೆಳೆಗಳನ್ನು ಬಹಳ ಪಾಲು ಅಧಿಕವಾಗಿ ತೆಗೆಯಬಹುದು. ಭೂಮಿಯ ಫಲವತ್ತತೆಯನ್ನೂ ಮತ್ತು ಉತ್ಪಾದನಾ ಪ್ರಮಾಣವನ್ನೂ ಯಂತ್ರೋಪಕರಣಗಳ ಬಳಕೆಯಿಂದ, ರಾಸಾಯನಿಕ ಗೊಬ್ಬರದ ಪ್ರಯೋಗ ನೀರಾವರಿ, ಇನ್ನು ಅನೇಕ ಮಾದರಿಗಳಿಂದ ಹೆಚ್ಚುಗೊಳಿಸಬಹುದು. ಇಂದು ಆಹಾರೋತ್ಪತ್ತಿಯ ಪ್ರಮಾಣವನ್ನು ಜನಸಂಖ್ಯೆಯ ಏರಿಕೆಯ ಪ್ರಮಾಣ ಕ್ಕಿಂತ ಅಧಿಕಪಾಲು ಹೆಚ್ಚಿಸಬಹುದೆಂದು ವಾದಿಸಿದರು.

ಎರಡನೆಯದಾಗಿ ಮಾಲ್ತಸನ ಪ್ರಕಾರ, ಜನಸಂಖ್ಯೆ ಯಾವಾಗಲೂ ಆಹಾರೋತ್ಪತ್ತಿಗೆ ಅನುಗುಣವಾಗಿರಬೇಕೆಂದು ಹೇಳಿರುವನು. ಆದರೆ ಮನು ಷ್ಯರು ಕೇವಲ ಹೊಟ್ಟೆಪಾಡಿಗಾಗಿ ಮಾತ್ರ ದುಡಿಯುವುದಿಲ್ಲ. ದುಡಿಮೆಯ ಮುಖ್ಯ ಉದ್ದೇಶವೆಂದರೆ ಜೀವನವನ್ನು ಉತ್ತಮ ಮಟ್ಟದಲ್ಲಿ ನಡೆಸಿಕೊಂಡು ಹೋಗುವುದಾಗಿದೆ. ಜೀವನದ ಮಟ್ಟ ಅಧಿಕವಿರುವ ರಾಷ್ಟ್ರಗಳಲ್ಲಿ ಜನಸಂಖ್ಯೆ ಯಾವಾಗಲೂ ನಿಯಂತ್ರಿತವಾಗಿರುವುದು. ಇದೂ ಅಲ್ಲದೆ ಆಹಾರದ ಉತ್ಪಾ ದನೆ ಹೆಚ್ಚಿಗೆ ಇರುವ ರಾಷ್ಟ್ರದ ಜನರ ಜೀವನದ ಮಟ್ಟ ಸುಧಾರಿಸಿದೆ ಎಂದೂ ಹೇಳಲಾಗುವುದಿಲ್ಲ. ಆದುದರಿಂದ ಜನಸಂಖ್ಯೆ ಯಾವಾಗಲೂ ಆಹಾರೋತ್ಪ ತ್ತಿಯ ಪ್ರಮಾಣಕ್ಕೆ ಅನುಗುಣವಾಗಿರಬೇಕೆಂದು ಹೇಳುವುದು ಸರಿಯಲ್ಲ.

ಮೂರನೆಯದಾಗಿ ಜೀವನದ ಮಟ್ಟ ಏರಿದಂತೆ ಜನಸಂಖ್ಯೆಯೂ ಏರು ವುದು ಎಂಬ ಮಾಲ್ತಸನ ನಿಲುವು ಸರಿಯಾದುದಲ್ಲ. ಜನರ ಆರ್ಥಿಕ ಮಟ್ಟ ಸುಧಾರಿಸಿದಂತೆ ಕುಟುಂಬದ ಗಾತ್ರ ಸಣ್ಣಗಾಗುತ್ತಿರುವುದನ್ನು ನಾವೆಲ್ಲರೂ ಇಂದು ನೋಡುತ್ತಿದ್ದೇವೆ. ಇಂದಿನ ಕಾಲದಲ್ಲಿ ಬಡವರ ಮನೆಗಳಲ್ಲಿ ಮಕ್ಕಳ ಸಂಖ್ಯೆ ಹೆಚ್ಚುತ್ತಿರುವುದೇ ಹೊರತು ಐಶ್ವರ್ಯವಂತರ ಮನೆಗಳಲ್ಲಿ ಅಲ್ಲ.

ನಾಲ್ಕನೆಯದಾಗಿ ಮಾಲ್ತಸನ ಪ್ರಕಾರ ಆಹಾರ ವಸ್ತುಗಳೆಂದರೆ ಕೇವಲ ಭೂಮಿಯಲ್ಲಿ ಉತ್ಪಾದನೆ ಮಾಡುವಂತವುಗಳು ಮಾತ್ರ ಎಂದಾಗುವುದು. ಆದರೆ ಮೀನು, ಮಾಂಸ, ಮೊಟ್ಟೆ, ಹಣ್ಣು ಹಂಪಲುಗಳು, ಕಾಯಿಪಲ್ಲೆಗಳು ಗೆಡ್ಡೆ ಗೆಣಸುಗಳು ಇವೇ ಮೊದಲಾದುವುಗಳನ್ನು ಆತನು ಸೇರಿಸಿಕೊಂಡಂತೆ ಕಾಣುವುದಿಲ್ಲ.

ಐದನೆಯದಾಗಿ ಮಾಲ್ತ್ಯಸನು ತನ್ನ ಸಿದ್ಧಾಂತದಲ್ಲಿ ಪ್ರಾಕೃತಿಕ ನಿಬಂಧನೆಗಳಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟಿರುವನು. ಆದರೆ ಇಂದಿನ ನಾಗರಿಕ ಯುಗದಲ್ಲಿ ಈ ವಿಷಯಗಳು ತಮ್ಮ ಪ್ರಭಾವಶಕ್ತಿಯನ್ನು ಕಳೆದು ಕೊಂಡಿವೆ. ಮಾನವನ ವೈಜ್ಞಾನಿಕ ಪ್ರಗತಿ, ಪ್ರಕೃತಿನಿಯಮಗಳನ್ನು ಕೂಡ ಸ್ವಲ್ಪಮಟ್ಟಿಗೆ ನಿವಾರಿಸುವಂತದ್ದಾಗಿದೆ.

ಕೊನೆಯದಾಗಿ ಮಾಲ್ತ್ಯಸನ ಸಿದ್ಧಾಂತ ಅಧಿಕ ಜನಸಂಖ್ಯೆಯಿರುವ ರಾಷ್ಟ್ರಗಳಿಗೆ ಮಾತ್ರ ಅನ್ವಯಿಸುವುದೇ ವಿನಃ ಕಡಿಮೆ ಜನಸಂಖ್ಯೆ ಯಿರುವ ರಾಷ್ಟ್ರಗಳಿಗಲ್ಲ.

### ಎಡ್ವಿನ್ ಕೇನನ್ನನ ಆದರ್ಶ ಜನಸಂಖ್ಯೆಯ ಸಿದ್ಧಾಂತ

ಎಡ್ವಿನ್ ಕ್ಯಾನನ್ನನ ಜನಸಂಖ್ಯೆಯ ಸಿದ್ಧಾಂತ ಮಾಲ್ತ್ಯಸನ ಸಿದ್ಧಾಂತ ಕ್ಕಿಂತ ಹೆಚ್ಚು ಸುಧಾರಿತವಾದುದಾಗಿದೆ. ಆದರಿಂದಲೇ ಇವನ ಸಿದ್ಧಾಂತ ವನ್ನು ಒಂದು ಆದರ್ಶ ಸಿದ್ಧಾಂತವೆನ್ನುವರು. ಮಾಲ್ತ್ಯಸ್ತನು ಜನಸಂಖ್ಯೆ ಯನ್ನು ಆಹಾರೋತ್ಪತ್ತಿಯ ದೃಷ್ಟಿಯಿಂದ ನೋಡಿದನು. ಆದರೆ ಕ್ಯಾನನ್ನನು ಸಂಪತ್ತನ್ನು ಆಧಾರವಾಗಿಟ್ಟುಕೊಂಡು ತನ್ನ ಸಿದ್ಧಾಂತವನ್ನು ನಿರೂಪಿಸಿರುವನು.

ಕ್ಯಾನನ್ನನ ಪ್ರಕಾರ ದೇಶದಲ್ಲಿ ದೊರಕುವ ಎಲ್ಲಾ ಉತ್ಪಾದನಾ ಸಾಧನಗಳನ್ನು ಸಂಪೂರ್ಣವಾಗಿ ಬಳಸಲು ಒಂದು ನಿರ್ದಿಷ್ಟವಾದ ಜನ ಸಂಖ್ಯೆಯ ಪ್ರಮಾಣ ಬೇಕಾಗುವುದು. ಈ ಪ್ರಮಾಣವು ಅತ್ಯಧಿಕವಾಗಿ ಅಥವಾ ಅತಿ ಕಡಿಮೆಯಾಗಿ ಇರಕೂಡದು. ಇದೇ ಆದರ್ಶ ಜನಸಂಖ್ಯೆ. ಇದರ ಪ್ರಮಾಣದಿಂದ ಎಲ್ಲಿ ಜನಸಂಖ್ಯೆ ಅಧಿಕವಾಗಿದೆ ಮತ್ತು ಎಲ್ಲಿ ಕಡಿಮೆ ಯಿದೆ ಎಂದು ನಿರ್ಧರಿಸಬಹುದು. ಯಾವ ದೇಶದಲ್ಲಿ ಆದರ್ಶ ಜನಸಂಖ್ಯೆಯ ಪ್ರಮಾಣಕ್ಕಿಂತ ಕಡಿಮೆ ಯಿರುವುದೋ ಅಲ್ಲಿ ಅಪೂರ್ಣ ಜನಸಂಖ್ಯೆ ಯಿರುವುದು ಎಂದು ತಿಳಿಯಬಹುದು. ಈ ರೀತಿಯ ಅಪೂರ್ಣ ಜನ ಸಂಖ್ಯೆಯು ಸಾಮಾನ್ಯವಾಗಿ ನವೀನ ರಾಷ್ಟ್ರಗಳಲ್ಲಿ ಸಂಭವಿಸಬಹುದು. ಇಂತಹ ರಾಷ್ಟ್ರಗಳಲ್ಲಿ ಜನಸಂಖ್ಯೆ ಏರಿದಂತೆ ವ್ಯಕ್ತಿಗಳ ಉತ್ಪನ್ನವೂ ಏರುವುದು.

ಈ ರೀತಿ ನೋಡಿದರೆ ಆದರ್ಶ ಜನಸಂಖ್ಯೆಯ ಸಿದ್ಧಾಂತ ಕ್ರಿಯಾತ್ಮಕ ವಾಗಿ ಕಂಡುಬರುವುದು. ಅಧಿಕ ಜನಸಂಖ್ಯೆಯು ಮತ್ತು ಕಡಿಮೆ ಜನ ಸಂಖ್ಯೆಯ ಕಲ್ಪನೆಗಳು ದೇಶದಲ್ಲಿ ದೊರಕುವ ಉತ್ಪಾದನಾ ಸಾಧನಗಳಿಂದ ನಿರ್ಧರಿಸಬಹುದು. ಈ ಸಿದ್ಧಾಂತವು ಸ್ವಲ್ಪಮಟ್ಟಿಗೆ ಆಶಾದಾಯಕವಾಗಿರು ವುದು. ಒಂದು ದೇಶವು ಆಹಾರವಸ್ತುಗಳ ಉತ್ಪಾದನೆಯನ್ನು ಬಿಟ್ಟು ಇತರ ಆರ್ಥಿಕ ವಸ್ತುಗಳನ್ನು ಉತ್ಪಾದಿಸಿ ಜನಸಂಖ್ಯೆಯನ್ನು ಸಲಹಬಹುದು.

ಕ್ಯಾನನ್ನನ ಸಿದ್ಧಾಂತವನ್ನು ಕೂಡ ಅರ್ಥಶಾಸ್ತ್ರಜ್ಞರು ಅನೇಕ ರೀತಿ ಯಲ್ಲಿ ಟೀಕಿಸಿದ್ದಾರೆ. ಮುಖ್ಯವಾಗಿ ಆದರ್ಶ ಜನಸಂಖ್ಯೆ ಎಂಬುದು ಕೇವಲ ಒಂದು ಮಾದರಿಯ ಪ್ರಮಾಣವನ್ನು ಸೂಚಿಸುತ್ತದೆ. ಇಂತಹ ಮಾದರಿ ಪ್ರಮಾಣ ವಾಸ್ತವಿಕತೆಯಲ್ಲಿ ಕಂಡುಬರುವುದಿಲ್ಲ.

ಎರಡನೆಯದಾಗಿ ಈ ಸಿದ್ಧಾಂತವು ಜನಸಂಖ್ಯೆಯ ಏರಿಕೆಯ ಪ್ರಮಾಣದ ವಿಷಯವಾಗಿ ಏನನ್ನೂ ಹೇಳುವುದಿಲ್ಲ. ಆದುದರಿಂದ ಇದನ್ನು ಜನಸಂಖ್ಯೆಯ ಒಂದು ಪೂರ್ಣ ಸಿದ್ಧಾಂತವೆಂದು ಕರೆಯಲು ಸಾಧ್ಯವಿಲ್ಲ.

ಕೊನೆಯದಾಗಿ ಈ ಸಿದ್ಧಾಂತವು ದೇಶದ ಆರ್ಥಿಕ ನೀತಿಗೆ ಮಾರ್ಗ ದರ್ಶನ ಮಾಡಲು ಹೆಚ್ಚು ಸಹಕಾರಿಯಾಗುವುದಿಲ್ಲವೆಂದು ಹೇಳಿರುವರು.

### ಭಾರತದ ಜನಸಂಖ್ಯೆ

ರಾಬರ್ಟ್ ಮಾಲ್ತಸ್ಸನ ಸಿದ್ಧಾಂತದ ಪ್ರಕಾರ ಭಾರತ ಅಧಿಕ ಜನ ಸಂಖ್ಯೆಯಿರುವ ರಾಷ್ಟ್ರವೆಂದೆನಿಸುವುದು. ಇಲ್ಲಿ ತಲೆದೋರುತ್ತಿರುವ ಕ್ಷಾಮ ಗಳು, ಬಡತನ, ರೋಗ ರುಜಿನಗಳು, ಮರಣ ಪ್ರಮಾಣ, ಇವೆಲ್ಲವೂ ಅಧಿಕ ಜನಸಂಖ್ಯೆಯ ಲಕ್ಷಣಗಳು. ಜನಸಂಖ್ಯೆಯ ಏರಿಕೆಯನ್ನು ನಿಯಂತ್ರಿಸಲು ಸರಕಾರವೇ ಕುಟುಂಬ ಯೋಜನೆ ಕ್ರಮಗಳನ್ನು ಪ್ರಚಾರಮಾಡುತ್ತಲಿದೆ. ಮದುವೆಯ ವಯಸ್ಸನ್ನು ಸರಕಾರವು ಶಾಸನದ ಮೂಲಕ ನಿಗದಿಪಡಿಸಿದೆ. ಆದರೆ ಕ್ಯಾನನ್ನನ ಆದರ್ಶ ಜನಸಂಖ್ಯೆ ಸಿದ್ಧಾಂತದ ಪ್ರಕಾರ ನೋಡಿದರೆ ನಮ್ಮ ದೇಶದ ಜನಸಂಖ್ಯೆ ಗಾಬರಿಯನ್ನುಂಟುಮಾಡುವಂತದ್ದಲ್ಲ. ನಮ್ಮ ದೇಶದಲ್ಲಿ ಪ್ರಾಕೃತಿಕ ಸಂಪತ್ತು ಯಥೇಚ್ಛವಾಗಿರುವುದು. ಇದರ ಸಂಪೂರ್ಣ ಪ್ರಯೋಜನವನ್ನು ಹೊಂದಲು ಈಗಿರುವ ಜನಸಂಖ್ಯೆ ಬೇಕಾಗುವುದು ಎನ್ನ ಬಹುದು.

## (೩) ಬಂಡವಾಳ

ಬಂಡವಾಳ ಎಂಬ ಪದಕ್ಕೆ ಅನೇಕ ಅರ್ಥಗಳಿವೆ. ಸಾಮಾನ್ಯವಾಗಿ ಹಣಕ್ಕೆ ಬಂಡವಾಳವೆಂದು ಕರೆಯುವರು. ಆದರೆ ಅರ್ಥಶಾಸ್ತ್ರದಲ್ಲಿ ಬಂಡವಾಳ ಎಂಬ ಪದಕ್ಕೆ ಬೇರೆಯಾದ ವಿವರಣೆಯಿದೆ. ಅದೇನೆಂದರೆ: ಸರಕು ಮತ್ತು ಸೇವೆಗಳ ಉತ್ಪಾದನೆಗಾಗಿ ಮನುಷ್ಯನು ಉಪಯೋಗಿಸುವ ಸಾಧನೆಗಳೆಲ್ಲ ವನ್ನೂ ಬಂಡವಾಳವೆಂದು ಕರೆಯುತ್ತಾರೆ. ಈ ಅರ್ಥದಲ್ಲಿ ಹಣ ಎಂಬುದು ಒಂದು ಮುಖ್ಯವಾದ ಬಂಡವಾಳದ ರೂಪ. ಆದುದರಿಂದ ಬಂಡವಾಳ ವೆಂಬುದು ಕೇವಲ ಹಣ ಮಾತ್ರವಲ್ಲದೆ ಇನ್ನು ಅನೇಕ ವಸ್ತುಗಳು ಇದರಲ್ಲಿ ಅಡಕವಾಗಿರುವುವು. ಒಬ್ಬ ವ್ಯಕ್ತಿಯ ಬಂಡವಾಳವೆಂದರೆ ಆತನಲ್ಲಿರುವ ಸ್ಥಿರ ಮತ್ತು ಚರ ಸ್ವತ್ತುಗಳು, ಮತ್ತು ನಗದು ಹಣ ಇವುಗಳ ಮೊತ್ತ ವಾಗುವುದು. ಉದಾ: ಒಬ್ಬ ರೈತನ ಬಂಡವಾಳವೆಂದರೆ ಆತನಲ್ಲಿರುವ ನಗದುಹಣ, ಬ್ಯಾಂಕಿನಲ್ಲಿರುವ ಹಣ, ಆತನಲ್ಲಿರುವ ಬೇಸಾಯದ ಉಪಕರಣಗಳು, ಆತನ ಮನೆ ಮತ್ತು ಇತರ ಕಟ್ಟಡಗಳು ಇವೆಲ್ಲವೂ ಸೇರು ವುವು. ಸೂಕ್ಷ್ಮವಾಗಿ ಹೇಳುವುದಾದರೆ ಸಂಪತ್ತನ್ನು ಉತ್ಪಾದಿಸಲು ಬೇಕಾಗುವ ಇತರ ಸಂಪತ್ತುಗಳಿಗೆ ಅರ್ಥಶಾಸ್ತ್ರದಲ್ಲಿ ಬಂಡವಾಳವೆಂದು ಕರೆಯುವರು.

ಬಂಡವಾಳವನ್ನು ಮುಖ್ಯವಾಗಿ ೫ ಭಾಗಗಳನ್ನಾಗಿ ವರ್ಗೀಕರಣ ಮಾಡಬಹುದು.

೧. ರಾಷ್ಟ್ರದ ಬಂಡವಾಳ:

ಇದಕ್ಕೆ ಹಲವಾರು ವಸ್ತುಗಳು ಸೇರುವುವು. ರಾಷ್ಟ್ರದಲ್ಲಿರುವ ಸಮಸ್ತ ಉತ್ಪಾದನಾ ಸಾಧನಗಳು ಅಂದರೆ ಬೀಜ ಧಾನ್ಯಗಳು, ಅಣೆಕಟ್ಟುಗಳು, ಕಾರ್ಖಾನೆಗಳು, ಸಂಚಾರ ಸೌಕರ್ಯಗಳು, ಗಣಿಗಳು, ಕಚ್ಚಾ ಮಾಲು ಗಳು, ಯಂತ್ರೋಪಕರಣಗಳು, ಕಟ್ಟಡಗಳು, ವ್ಯಾಪಾರದ ವಸ್ತುಗಳು, ವಿದೇಶೀಯ ಹಣ ಸಂಗ್ರಹ ಮತ್ತು ಇತರ ಹಣ ಇವುಗಳೆಲ್ಲಾ ರಾಷ್ಟ್ರದ ಬಂಡವಾಳವೆನ್ನಿಸುವುದು.

೨. ಖಾಸಗಿ ಮತ್ತು ಸಾಮಾಜಿಕ ಬಂಡವಾಳ:

ಒಬ್ಬ ವ್ಯಕ್ತಿಯಲ್ಲಿರುವ ಉತ್ಪಾದನೆಗೆ ಬೇಕಾಗುವ ಸಾಧನಗಳನ್ನೆಲ್ಲಾ

ಖಾಸಗಿ ಬಂಡವಾಳವೆನ್ನುವರು. ಯಾವ ಬಂಡವಾಳವನ್ನು ಸಾಮಾಜಿಕ ಅಭಿವೃದ್ಧಿ ಕಾರ್ಯಗಳಿಗೆ ಉಪಯೋಗಿಸಿದರೆ ಅದು ಸಾಮಾಜಿಕ ಬಂಡವಾಳ ವೆನಿಸುವುದು.

೩. ಚರ ಮತ್ತು ಸ್ಥಿರ ಬಂಡವಾಳ :

ಕೇವಲ ಒಂದು ಸಲ ಮಾತ್ರ ಉಪಯೋಗಕ್ಕೆ ಬರುವ ಸರಕುಗಳನ್ನು ಚರ ಬಂಡವಾಳವೆಂದೂ, ಬಾಳಿಕೆ ಬರುವ ಸರಕುಗಳನ್ನು ಸ್ಥಿರ ಬಂಡವಾಳ ವೆಂದೂ ಕರೆಯಲಾಗುವುದು. ಉದಾ :— ಯಂತ್ರೋಪಕರಣಗಳು, ವಾಹನಗಳು ಮುಂತಾದವುಗಳನ್ನು ಧೀರ್ಘಕಾಲದವರೆಗೆ ಉಪಯೋಗಿಸಬಹು ದಾದುದರಿಂದ ಅಂತವುಗಳನ್ನು ಸ್ಥಿರ ಬಂಡವಾಳವೆಂದು ಕರೆಯಲಾಗುವುದು. ಕಚ್ಛಾವಸ್ತುಗಳು, ಹತ್ತಿ, ಎಣ್ಣೆಬೀಜ ಮೊದಲಾದ ಒಂದುಸಲ ಮಾತ್ರ ಬಳಸಲಿಕ್ಕೆ ಬರುವ ವಸ್ತುಗಳಿಗೆ ಚರಬಂಡವಾಳವೆಂದು ಹೇಳಲಾಗುವುದು.

೪. ಏಕೋಪಯೋಗ ಮತ್ತು ವಿವಿಧೋಪಯೋಗ ಬಂಡವಾಳ :

ಯಾವಯಾವ ವಸ್ತುಗಳು ಒಂದೇ ರೀತಿಯ ಉಪಯೋಗಕ್ಕೆ ಬರುವುದೋ ಅಂಥವುಗಳನ್ನು ಏಕೋಪಯೋಗ ಬಂಡವಾಳವೆಂದು ಕರೆಯು ವರು. ಉದಾ :— ರೈಲುಹಳಿ, ಉಷ್ಣಮಾಪಕ ಯಂತ್ರ ಮೊದಲಾದವು ಗಳು. ಮತ್ತು ಯಾವ ವಸ್ತುಗಳನ್ನು ಬಹಳ ರೀತಿಯಲ್ಲಿ ಉಪಯೋಗಿಸ ಬಹುದೋ ಅವುಗಳನ್ನು ವಿವಿಧೋಪಯೋಗ ಬಂಡವಾಳವೆನ್ನುವರು. ಉದಾ :— ಕಲ್ಲಿದ್ದಲು, ಕಬ್ಬಿಣ, ಉಕ್ಕು, ಮರಮಟ್ಟುಗಳು ಇತ್ಯಾದಿ.

೫. ವ್ಯಕ್ತಿಗತ ಬಂಡವಾಳ :

ವ್ಯಕ್ತಿಗಳಲ್ಲಿರುವ ಸೇವಾಶಕ್ತಿ ವ್ಯಕ್ತಿಗತ ಬಂಡವಾಳವೆನ್ನಿಸುವುದು. ಉದಾ :— ಇಂಜಿನಿಯರುಗಳು, ವೈದ್ಯರುಗಳು, ಸಂಗೀತಗಾರರು ಮೊದ ಲಾದವರ ಸೇವಾಶಕ್ತಿಗೆ ವ್ಯಕ್ತಿಗತ ಬಂಡವಾಳವೆಂದು ಕರೆಯುವರು.

ಬಂಡವಾಳದ ಲಕ್ಷಣಗಳು :

೧. ಬಂಡವಾಳವು ವಸ್ತುಗಳನ್ನು ಉತ್ಪಾದಿಸುವ ಶಕ್ತಿಯನ್ನು ಹೊಂದಿರುವುದು. ಇದರ ಪ್ರಯೋಗವಿಲ್ಲದೆ ಯಾವುದನ್ನೂ ಉತ್ಪಾದಿಸಲು ಸಾಧ್ಯವಿಲ್ಲ.

೨. ಬಂಡವಾಳಕ್ಕೆ ವರಮಾನ ದೊರಕಿಸಿಕೊಡುವ ಸಾಮರ್ಥ್ಯ ಇರುವುದು.

೩. ಬಂಡವಾಳ ಯಾವಾಗಲೂ ಅಸ್ಥಿರವಾಗಿರುವುದು. ಉತ್ಪಾದನೆಯಲ್ಲಿ ಉಪಯೋಗಿಸಿದ ಬಂಡವಾಳ ಮುಗಿದಂತೆಲ್ಲಾ ಅವುಗಳನ್ನು ಪುನರುತ್ಪಾದನೆ ಮಾಡಬೇಕಾಗುವುದು.

**ಬಂಡವಾಳದ ಕೆಲಸಗಳು :**

ಇಂದಿನ ಆರ್ಥಿಕ ವ್ಯವಸ್ಥೆಯಲ್ಲಿ ಬಂಡವಾಳವು ಹಲವಾರು ಕೆಲಸಗಳನ್ನು ಮಾಡುತ್ತದೆ.

೧. ಮಾನವನು ಇಂದು ಯಾವುದೇ ವಸ್ತುವನ್ನು ಉತ್ಪಾದಿಸಬೇಕಾದರೆ ಬಂಡವಾಳವು ಬೇಕೇಬೇಕು. ಅಧಿಕ ಪ್ರಮಾಣದ ಉತ್ಪಾದನೆಗೆ ಬೇಕಾಗಿರುವ ಯಂತ್ರೋಪಕರಣಗಳು, ಕಾರ್ಖಾನೆ, ಕಟ್ಟಡಗಳು, ಮೊದಲಾದವುಗಳನ್ನು ಒದಗಿಸಿಕೊಳ್ಳಲು ಬಂಡವಾಳವು ಅವಶ್ಯಕವಾಗಿ ಬೇಕಾಗುವುದು.

೨. ಕೆಲಸಗಾರರಿಗೆ ಸಂಬಳ ಕೊಡಲು ಬಂಡವಾಳ ಬೇಕು. ಉತ್ಪಾದಿಸಲ್ಪಟ್ಟ ವಸ್ತುಗಳು ಮಾರಾಟವಾಗುವವರೆಗೆ ಕೆಲಸಗಾರರಿಗೆ ವೇತನ ಕೊಡಬೇಕಾಗುವುದು.

೩. ಉತ್ಪಾದನೆಯಾದ ಸರಕುಗಳನ್ನು ಒಂದುಕಡೆಯಿಂದ ಎಲ್ಲಾ ಕಡೆಗಳಿಗೆ ರವಾನಿಸಲಿಕ್ಕೆ ಸಂಚಾರ ವ್ಯವಸ್ಥೆಗಳನ್ನು ಮಾಡಬೇಕಾಗುವುದು. ಇವುಗಳಿಗೆ ಬಂಡವಾಳ ಬೇಕಾಗುವುದು.

೪. ಬಂಡವಾಳದ ಮುಖ್ಯ ಕೆಲಸಗಳಲ್ಲಿ ಮತ್ತೊಂದು ಯಾವುದೆಂದರೆ ಜನರಿಗೆ ಉದ್ಯೋಗ ಕಲ್ಪಿಸಿಕೊಡುವುದಾಗಿದೆ. ಬಂಡವಾಳದ ಅಭಾವ ಇರುವ ರಾಷ್ಟ್ರ ಆರ್ಥಿಕ ಪ್ರಗತಿಯನ್ನು ಸಾಧಿಸಲು ಸಾಧ್ಯವಿಲ್ಲ. ಅಂತಹ ರಾಷ್ಟ್ರಗಳಲ್ಲಿ ಬಡತನ ಮತ್ತು ನಿರುದ್ಯೋಗ ತಲೆದೋರುವುವು.

**ಬಂಡವಾಳದ ನಿರ್ಮಾಣ :**

ಒಂದು ದೇಶದಲ್ಲಿ ಬಂಡವಾಳ ನಿರ್ಮಾಣವಾಗಬೇಕಾದರೆ ಮುಖ್ಯವಾಗಿ ಜನರಲ್ಲಿ ಉಳಿತಾಯಮಾಡುವ ಮನೋಭಾವವು ಇರಬೇಕು. ಜನರು

ತಮ್ಮ ಸಂಪಾದನೆಯನ್ನು ಪೂರ್ತಿಯಾಗಿ ವೆಚ್ಚಮಾಡುವರು. [illegible] ಯಾವ ರೀತಿಯ ಉಳಿತಾಯವೂ ಆಗುವುದಿಲ್ಲ. ಇದರಿಂದ ಬಂಡವಾಳದ ನಿರ್ಮಾಣ ಆಗುವುದಿಲ್ಲ. ರಾಷ್ಟ್ರೀಯ ವರಮಾನ ಅಧಿಕವಾಗಿರುವ ದೇಶದ ಜನರಲ್ಲಿ ಉಳಿತಾಯದ ಶಕ್ತಿ ಹೆಚ್ಚಿರುವುದು. ಉಳಿತಾಯ ಮಾಡುವ ಮನೋಭಾವ ಜನರಲ್ಲಿ ಮೂಡಬೇಕಾದರೆ, ವಿವೇಕ, ಮುಂದಾಲೋಚನೆ, ಹೊಣೆಗಾರಿಕೆ ಮತ್ತು ಕರ್ತವ್ಯ ಶ್ರದ್ಧೆ ಮುಖ್ಯವಾಗಿ ಇರಬೇಕಾಗುವುದು. ಇವುಗಳೊಟ್ಟಿಗೆ ಸುಭದ್ರವಾದ ಸರಕಾರ, ಆಸ್ತಿಪಾಸ್ತಿಗಳ ಸುರಕ್ಷತೆ ಮತ್ತು ಉತ್ಪಾದನೆಯಲ್ಲಿ ಲಾಭ ಮತ್ತು ಬ್ಯಾಂಕುಗಳ ಸೌಲಭ್ಯ ಅವಶ್ಯಕವಾಗಿರಬೇಕು.

ದೇಶದ ಬಂಡವಾಳ ಹೆಚ್ಚಾಗಲು ಜನರಲ್ಲಿ ಉಳಿತಾಯದ ಮನೋಭಾವ ಹೆಚ್ಚಬೇಕು. ಅಧಿಕ ಉತ್ಪನ್ನ ಇರುವವರಲ್ಲಿ ಉಳಿತಾಯವು ಸ್ವೇಚ್ಛೆಯಾಗಿ ಆಗುವುದು. ಅಂತಹ ಜನರು ತಮ್ಮ ಉಳಿತಾಯವನ್ನು ಬಡ್ಡಿಗೆ ಸಾಲ ಕೊಟ್ಟು ತಮ್ಮ ಬಂಡವಾಳವನ್ನು ಹೆಚ್ಚು ಹೆಚ್ಚಾಗಿ ಮಾಡಲು ಪ್ರಯತ್ನಿಸುವರು. ಹಣಕ್ಕೆ ಹೆಚ್ಚಿನ ಬಡ್ಡಿದರ ಸಿಗುವಲ್ಲಿ ಉಳಿತಾಯದ ಪ್ರಯತ್ನ ಕೂಡ ಅಧಿಕವಾಗಿರುವುದು.

ಜನರಲ್ಲಿ ಉಳಿತಾಯದ ಮನೋಭಾವ ಉಂಟಾಗಬೇಕಾದರೆ ಅನೇಕ ರೀತಿಯ ಸಾಧನಗಳು ಇರಬೇಕು. ಇಂದಿನ ಆರ್ಥಿಕ ವ್ಯವಸ್ಥೆಯಲ್ಲಿ ಉಳಿತಾಯ ಮಾಡುವ ವ್ಯಕ್ತಿಗಳೇ ಬೇರೆ, ಮತ್ತು ಬಂಡವಾಳವನ್ನು ವಿನಿಯೋಗಿಸುವವರೇ ಬೇರೆಯಾಗಿರುತ್ತಾರೆ. ಇವರೆಲ್ಲರನ್ನೂ ಒಂದುಗೂಡಿಸುವ ಸಂಸ್ಥೆಗಳೆಂದರೆ ಬ್ಯಾಂಕುಗಳು. ಆದುದರಿಂದ ಒಂದು ದೇಶದ ಬಂಡವಾಳ ನಿರ್ಮಾಣ ಕಾರ್ಯದಲ್ಲಿ ಬ್ಯಾಂಕುಗಳ ಪಾತ್ರ ಮಹತ್ವದ್ದಾಗಿದೆ.

ಬಂಡವಾಳ ನಿರ್ಮಾಣಕ್ಕೆ ಶಕ್ತಿಯುತವಾದ ಸರ್ಕಾರದ ಹಿನ್ನೆಲೆ ಇರಬೇಕು. ಜನರ ಸರ್ವಸ್ವವನ್ನೂ ಸುರಕ್ಷಿತವಾಗಿ ಕಾಪಾಡುವ ಸರಕಾರದ ಭರವಸೆಯಿರಬೇಕು. ಇಂತಹ ಸುರಕ್ಷಿತವಾದ ವಾತಾವರಣದಲ್ಲಿ ಮಾತ್ರ ಜನರು ಉಳಿತಾಯದ ಕಡೆಗೆ ಗಮನ ಕೊಡುವರು. ದೇಶದಲ್ಲಿ ಸುಭದ್ರತೆ ಮತ್ತು ಸುವ್ಯವಸ್ಥೆ ಇದ್ದರೆ ಮಾತ್ರ ಬಂಡವಾಳ ಹೆಚ್ಚುವದು.

ಬಂಡವಾಳ ನಿರ್ಮಾಣವಾಗಬೇಕಾದರೆ ದೇಶದಲ್ಲಿ ಉಳಿಸಿದ ಬಂಡ

ವಾಳದ ವಿನಿಯೋಗಕ್ಕೆ ಸಾಕಷ್ಟು ಅವಕಾಶ ಇರಬೇಕು. ಉಳಿತಾಯವನ್ನು ಉತ್ಪಾದನಾ ಕಾರ್ಯಕ್ಕೆ ಹಾಕಲು ಸಾಕಷ್ಟು ಸೌಲಭ್ಯಗಳು ಇರಬೇಕು.

ಭಾರತದಲ್ಲಿ ಬಂಡವಾಳ ನಿರ್ಮಾಣವಾಗಲು ಸರಕಾರವು ಅನೇಕ ಸೌಲಭ್ಯಗಳನ್ನು ಒದಗಿಸಿರುವುದು. ಜನರು ತಮ್ಮ ಉಳಿತಾಯವನ್ನು ಚಿಕ್ಕ ಪ್ರಮಾಣಗಳಲ್ಲಿ ಉಪಯೋಗಿಸಲು "ಯೂನಿಟ್ ಟ್ರಸ್ಟ್ ಆಫ್ ಇಂಡಿಯಾ'' ಎಂಬ ಸಂಸ್ಥೆಯನ್ನು ಸ್ಥಾಪಿಸಲಾಗಿದೆ. ಇದಲ್ಲದೆ ದೇಶದಲ್ಲಿ ಎಲ್ಲಾ ಬಗೆಯ ಬ್ಯಾಂಕುಗಳು, ಜೀವವಿಮಾ ಕಾರ್ಪೊರೇಷನ್ ಇವೇ ಮುಂತಾದ ಸಂಸ್ಥೆಗಳು ಜನರಲ್ಲಿ ಉಳಿತಾಯವನ್ನು ಮೂಡಿಸುವುದು. ಇವೇ ಅಲ್ಲದೆ ಸರಕಾರವು ಸಾರ್ವಜನಿಕ ಕ್ಷೇತ್ರದಲ್ಲಿ ಅನೇಕ ಉದ್ಯಮಗಳನ್ನು ಸ್ಥಾಪಿಸಿ ಜನರಿಗೆ ಅವುಗಳಲ್ಲಿ ತಮ್ಮ ಉಳಿತಾಯವನ್ನು ವಿನಿಯೋಗಿಸುವ ಅವಕಾಶಗಳನ್ನು ಕಲ್ಪಿಸಿರುವುದು.

## (೪) ದೊಡ್ಡ ಪ್ರಮಾಣದ ಉತ್ಪಾದನೆ

ಜಗತ್ತಿನಲ್ಲಿ ಮಾನವನ ಆರ್ಥಿಕ ಜೀವನದಲ್ಲಿ ಮೊದಲು ಇದ್ದ ಉತ್ಪಾದನಾ ವ್ಯವಸ್ಥೆಯೆಂದರೆ ಸಣ್ಣ ಪ್ರಮಾಣದ ಉತ್ಪಾದನೆ ಮಾತ್ರ. ಹಿಂದಿನ ಕಾಲದಲ್ಲಿ ಕುಟುಂಬವೇ ಉತ್ಪಾದನೆಯ ಒಂದು ಹಂತವಾಗಿತ್ತು. ಆಗ ಜನರು ತಮಗೆ ಬೇಕಾದ ವಸ್ತುಗಳನ್ನು ತಾವೇ ಉತ್ಪಾದನೆ ಮಾಡಿ ಕೊಳ್ಳುತ್ತಿದ್ದರು. ವ್ಯಕ್ತಿಗಳ ಉತ್ಪಾದನೆ ತಮಗೆ ಬೇಕಿದ್ದಕ್ಕಿಂತಲೂ ಹೆಚ್ಚು ಇದ್ದಾಗ ತಮ್ಮ ವಸ್ತುಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುತ್ತಿದ್ದರು. ಆದರೆ ಜನಸಂಖ್ಯೆ ಹೆಚ್ಚಿದಂತೆಲ್ಲಾ ಮತ್ತು ಜನರ ಅವಶ್ಯಕತೆಗಳೂ ಅಧಿಕ ವಾದಂತೆಲ್ಲಾ ಸಣ್ಣ ಪ್ರಮಾಣದ ಉತ್ಪಾದನೆಯ ವಸ್ತುಗಳು ಸಾಲದಾದುವು. ವಸ್ತುಗಳನ್ನು ಅಧಿಕ ಪ್ರಮಾಣದಲ್ಲಿ ಉತ್ಪಾದಿಸುವ ಸನ್ನಿವೇಶಗಳು ತಲೆ ದೋರಿದವು. ಆಗ ಉತ್ಪಾದನೆಯು ಕೌಟುಂಬಿಕ ಹಂತದಿಂದ ಕಾರ್ಖಾನೆಯ ಹಂತಕ್ಕೆ ಬದಲಾಯಿತು. ಉತ್ಪಾದನೆಯಲ್ಲಿ ಯಂತ್ರೋಪಕರಣಗಳನ್ನು ಉಪಯೋಗಿಸುವಂತಾಯಿತು.

ಈ ರೀತಿ ಎಲ್ಲ ಕಡೆಗಳಲ್ಲೂ ದೊಡ್ಡ ಪ್ರಮಾಣದ ಉತ್ಪಾದನೆ ಪ್ರಾರಂಭವಾಯಿತು. ಇಂದಿನ ಅಧಿಕ ಜನಸಂಖ್ಯೆಯ ಪ್ರಪಂಚದಲ್ಲಿ

ಉತ್ಪಾದನೆಯ ಕ್ರಮ ಬಹಳ ಪಾಲು ಮುಂದುವರಿದಿದ್ದರೂ ಕ್ಷೂಷ ಉತ್ಪಾದನೆಯ ಕೊರತೆ ಎಲ್ಲೆಲ್ಲೂ ಕಾಣುತ್ತಿರುವುದು. ದೊಡ್ಡ ಪ್ರಮಾಣದ ಉತ್ಪಾದನೆಯಲ್ಲಿ ಹಲವಾರು ಪ್ರಯೋಜನಗಳಿವೆ.

೧. ದೊಡ್ಡ ಪ್ರಮಾಣದ ಉತ್ಪಾದನಾ ವ್ಯವಸ್ಥೆಯಲ್ಲಿ ಆಧುನಿಕ ರೀತಿಯ ಹೆಚ್ಚು ಬೆಲೆಬಾಳುವ ಯಂತ್ರೋಪಕರಣಗಳನ್ನು ಉಪಯೋಗಿಸ ಬಹುದು. ಇಂದು ಯಂತ್ರಗಳು ವಸ್ತುಗಳನ್ನು ಅಧಿಕ ಪ್ರಮಾಣದಲ್ಲಿಯೂ ಮತ್ತು ಕಡಿಮೆ ವೆಚ್ಚದಲ್ಲಿಯೂ ತಯಾರಿಸಬಲ್ಲುದು.

೨. ಉತ್ಪಾದನಾ ಕ್ಷೇತ್ರದಲ್ಲಿ ಕೆಲಸಗಾರರನ್ನು ಬೇರೆ ಬೇರೆ ಕೆಲಸ ಗಳಿಗೆ ಸೇರಿಸಿಕೊಂಡು ಉತ್ಪಾದನೆಯನ್ನು ಬಹಳ ದಕ್ಷತೆಯಿಂದ ಮಾಡ ಬಹುದು.

೩. ಉತ್ಪಾದನೆಯಲ್ಲಿ ಯಂತ್ರಗಳನ್ನು ಪಯೋಗಿಸುವುದರಿಂದ ಶ್ರಮ ಶಕ್ತಿ ಹೆಚ್ಚುವುದಲ್ಲದೆ ಉತ್ಪಾದನೆಯ ವೆಚ್ಚ ಕೂಡ ಕಡಿಮೆಯಾಗುವುದು.

೪. ದೊಡ್ಡ ಪ್ರಮಾಣದ ಉತ್ಪಾದನಾ ಕ್ಷೇತ್ರದಲ್ಲಿ ಹಲವಾರು ಸಂಘಟನಾ ಅನುಕೂಲತೆಗಳು ಇರುವುವು. ಮುಖ್ಯವಾಗಿ ಉತ್ಪಾದನೆಯ ಒಂದೊಂದು ಹಂತವನ್ನು ಸರಿಯಾಗಿ ನೋಡಿಕೊಳ್ಳಲು ಬೇರೆ ಬೇರೆ ವ್ಯವಸ್ಥಾಪಕರನ್ನು ನೇಮಿಸಿಕೊಳ್ಳಬಹುದು. ಎಲ್ಲಾ ವ್ಯವಸ್ಥಾಪಕರ ಕೆಲಸ ಕಾರ್ಯಗಳನ್ನು ಪರಿಶೀಲಿಸಲು ಒಬ್ಬ ಮುಖ್ಯ ವ್ಯವಸ್ಥಾಪಕನು ಇರುವನು.

೫. ದೊಡ್ಡ ಪ್ರಮಾಣದ ಉದ್ದಿಮೆಗೆ ಸಾಕಷ್ಟು ಹಣದ ಸೌಕರ್ಯ ಹೊಂದಲು ಸಾಧ್ಯವಾಗುವುದು. ಬ್ಯಾಂಕುಗಳು ಇಂತಹ ಉದ್ದಿಮೆಗಳಿಗೆ ಹೆಚ್ಚು ಸಾಲ ಕೊಡುವುವು. ಇವಲ್ಲದೆ ದೊಡ್ಡ ಉದ್ದಿಮೆಗಳು ಷೇರು ಮತ್ತು ಇತರ ರೂಪದಲ್ಲಿ ಬಂಡವಾಳವನ್ನು ಸುಲಭವಾಗಿ ಎತ್ತುವುವು.

೬. ದೊಡ್ಡ ಉದ್ದಿಮೆಗೆ ಪೇಟೆಯ ಸೌಲಭ್ಯಗಳು ಹೆಚ್ಚಿರುವುವು. ಕಚ್ಚಾ ವಸ್ತುಗಳನ್ನು ಕೊಳ್ಳುವ ವ್ಯವಸ್ಥೆ, ಸಾಗಾಣಿಕೆ ವ್ಯವಸ್ಥೆ, ವಸ್ತುಗಳ ಮಾರಾಟದ ವ್ಯವಸ್ಥೆ, ಇವುಗಳನ್ನೆಲ್ಲಾ ಹೆಚ್ಚು ಯಶಸ್ವಿಯಾಗಿ ಮಾಡಿಕೊಳ್ಳ ಬಹುದು.

೭. ಪೇಟೆಯಲ್ಲಿನ ಜಿಲ್ಲೆಯ ಏರಿಳಿತಗಳನ್ನು ಎದುರಿಸುವ ಶಕ್ತಿ ದೊಡ್ಡ ಉದ್ದಿಮೆಗಳಿಗೆ ಇರುವುವು. ಒಂದುಕಡೆ ಬೆಲೆ ಕಡಿಮೆಯಿದ್ದರೆ,

[illegible] ಮತ್ತು ವಸ್ತುಗಳಿಗೆ ಬೇಡಿಕೆ ಅಧಿಕವಿರುವ ಸ್ಥಳಕ್ಕೆ [illegible] [illegible] ಅನುಕೂಲತೆ ಮತ್ತು ಶಕ್ತಿ ದೊಡ್ಡ ಉದ್ದಿಮೆಗಳಿಗೆ ಮಾತ್ರ ಇರುವುದು.

೮. ದೊಡ್ಡ ಉದ್ದಿಮೆಗಳಿಗೆ ಪ್ರಚಾರ ಕಾರ್ಯ ಸುಲಭ. ಇವುಗಳು ವಾರ್ತಾಪ್ರಸಾರದ ಪ್ರಯೋಜನಗಳನ್ನು ಹೊಂದಬಹುದು. ಇಂತಹ ಉದ್ದಿಮೆ ಸ್ಥಳೀಕರಣವಾದ ಸ್ಥಳದಲ್ಲಿ ಸಾಗಣೆ ವ್ಯವಸ್ಥೆ, ಬ್ಯಾಂಕುಗಳು, ವಿಮಾ ಸಂಸ್ಥೆಗಳು, ತರಬೇತಿ ಕೇಂದ್ರಗಳು ಮೊದಲಾದವು ಉದ್ಭವಿಸುವುವು.

೯. ವೈಜ್ಞಾನಿಕ ಮುನ್ನಡೆಯಲ್ಲಿರುವ ಇಂದಿನ ಪ್ರಪಂಚದಲ್ಲಿ ಹೊಸ ಬಗೆಯ ಸಂಶೋಧನೆಗಳನ್ನು ಎಲ್ಲಾ ಕ್ಷೇತ್ರದಲ್ಲಿಯೂ ಮಾಡುತ್ತಿರುವರು. ಉತ್ಪಾದನೆಗೆ ಬೇಕಾಗುವ ಯಾಂತ್ರಿಕ ಸಂಶೋಧನೆಗಳನ್ನು ದೊಡ್ಡ ಉದ್ದಿಮೆಗಳು ಸುಲಭವಾಗಿ ಅಳವಡಿಸಿಕೊಳ್ಳಬಹುದು. ದೊಡ್ಡ ಪ್ರಮಾಣದ ಉತ್ಪಾದನೆ ಕ್ರಮದಲ್ಲಿ ಕೆಲವು ಲೋಪದೋಷಗಳಿರುವುವು.

೧. ದೊಡ್ಡ ಉದ್ದಿಮೆಗಳು ಉತ್ಪಾದನೆಯ ಒಂದು ಹಂತವನ್ನು ಮುಟ್ಟಿದನಂತರ ಅದರ ಬೆಳವಣಿಗೆ ನಿಂತುಹೋಗುವುದು.

೨. ಉದ್ದಿಮೆಯ ಗಾತ್ರ ಹೆಚ್ಚಾದಂತೆ ನಾನಾ ಬಗೆಯ ಅನಾನುಕೂಲತೆಗಳು ತಲೆದೋರುವುವು.

೩. ಸಂಘಟನಾ ಕೆಲಸದಲ್ಲಿ ಸಾಮರ್ಥ್ಯ ಕಡಿಮೆಯಾಗುವುದು.

೪. ದೊಡ್ಡ ಉದ್ದಿಮೆಗಳ ಕಾರ್ಖಾನೆಗಳಲ್ಲಿ ಯಾಂತ್ರಿಕ ತೊಂದರೆಗಳು ಆಗಾಗ್ಗೆ ಉಂಟಾಗುವುವು. ಇದರಿಂದ ಅಪಾರ ನಷ್ಟ ಸಂಭವಿಸುವುದು.

೫. ಶೀಘ್ರ ನಾಶವಾಗುವ ವಸ್ತುಗಳ ಉತ್ಪಾದನೆಗೆ ದೊಡ್ಡ ಉದ್ದಿಮೆಗಳು ಪ್ರಯೋಜನವಿರುವುದಿಲ್ಲ.

### ಕೈಗಾರಿಕೆಗಳ ಸ್ಥಳೀಕರಣ

ಪ್ರತಿಯೊಂದು ದೇಶದಲ್ಲಿ ಒಂದೊಂದು ಕೈಗಾರಿಕೆ ಒಂದೊಂದು ಸ್ಥಳದಲ್ಲಿ ಕೇಂದ್ರೀಕೃತವಾಗಿರುವುದು. ಇದಕ್ಕೆ ಕೈಗಾರಿಕೆಯ ಸ್ಥಳೀಕರಣ ವೆನ್ನುತ್ತಾರೆ. ಒಬ್ಬ ಕೈಗಾರಿಕೋದ್ಯಮಿ, ಒಂದು ಕೈಗಾರಿಕೆಯನ್ನು

ಸ್ಥಾಪನೆ ಮಾಡಬೇಕಾದರೆ ಅನೇಕ ವಿಷಯಗಳನ್ನು ಗಮನಿಸುತ್ತಾನೆ. ತದನಂತರ ಹೆಚ್ಚು ಅನುಕೂಲಗಳಿರುವಂತಹ ಸ್ಥಳದಲ್ಲಿ ತನ್ನ ಕಾರ್ಖಾನೆಯನ್ನು ಸ್ಥಾಪಿಸುವನು. ಅವನು ಗಮನಿಸುವ ಅನುಕೂಲತೆಗಳಲ್ಲಿ ಮುಖ್ಯವಾದವುಗಳು ಎಂದರೆ ಪ್ರಾಕೃತಿಕ ಅನುಕೂಲತೆಗಳು ಮತ್ತು ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಔದ್ಯೋಗಿಕ ಸೌಲಭ್ಯಗಳು.

### ಪ್ರಾಕೃತಿಕ ಅನುಕೂಲತೆಗಳು

ಪ್ರಾಕೃತಿಕ ಅನುಕೂಲತೆಗಳಲ್ಲಿ ಅತೀ ಮುಖ್ಯವಾದವುಗಳೆಂದರೆ ಭೂಮಿಯ ಫಲವತ್ತತೆ, ಹವಾಮಾನ, ನದಿ, ಸಮುದ್ರ, ಸಾರಿಗೆ ವ್ಯವಸ್ಥೆಗಳು ಇವೇ ಮೊದಲಾದವುಗಳಾಗಿವೆ. ಭೂಮಿಯ ಗುಣವನ್ನು ಅನುಸರಿಸಿಕೊಂಡೇ ಸೆಣಬಿನ ಉತ್ಪಾದನೆ ಬಂಗಾಳದಲ್ಲಿ ಸ್ಥಳೀಕರಣವಾಗಿದೆ. ಹವಾಮಾನದ ಅನುಕೂಲತೆಗೋಸ್ಕರ ಬಟ್ಟೆ ತಯಾರಿಕೆ ಕೊಯಮತ್ತೂರು, ಮತ್ತು ಮುಂಬಯಿಗಳಲ್ಲಿ ಸ್ಥಳೀಕರಣವಾಗಿರುವುದು.

### ಆರ್ಥಿಕ ಅನುಕೂಲತೆಗಳು

ಇವುಗಳಲ್ಲಿ ಮುಖ್ಯವಾದವುಗಳೆಂದರೆ ಕಚ್ಚಾ ಪದಾರ್ಥಗಳ ಒದಗುವಿಕೆ, ಕೆಲಸಗಾರರು ಧಾರಾಳವಾಗಿ ಸಿಗುವುದು, ಪೇಟೆಗಳ ಸಾಮೀಪ್ಯ ಮೊದಲಾದವುಗಳಾಗಿವೆ.

ಸರಕಾರವು ಸಹಾಯ ಮತ್ತು ಎಲ್ಲಾ ಸೌಕರ್ಯಗಳನ್ನು ಕೊಟ್ಟು ಕೆಲವು ಉದ್ದಿಮೆಗಳನ್ನು ರಾಜಕೀಯ ದೃಷ್ಟಿಯಿಂದ ಕೆಲವು ಕಡೆಗಳಲ್ಲಿ ಸ್ಥಾನೀಕರಿಸಬಹುದು.

ಒಂದು ಸ್ಥಳದ ವಾಣಿಜ್ಯ ಪ್ರಖ್ಯಾತಿಯು, ಸ್ಥಳೀಕರಣಕ್ಕೆ ಸಹಾಯಕವಾಗುವುದು. ಉದಾ: ಬಟ್ಟೆ ಮಾಡುವ ಕಾರ್ಖಾನೆಯನ್ನು ಸ್ಥಾಪಿಸಬೇಕೆಂದಿರುವ ಉದ್ಯಮಿಯು ಮುಂಬಯಿ ಅಥವಾ ಅಹಮ್ಮದಾಬಾದಿನಲ್ಲಿ ಸ್ಥಾಪಿಸಲು ಯೋಚಿಸುವನು. ಪಾದರಕ್ಷೆ ತಯಾರಿಕೆಗೆ ಕಾನ್ಪುರವನ್ನು ಯೋಚಿಸುವನು.

### ಸ್ಥಳೀಕರಣದ ಪ್ರಯೋಜನಗಳು

ಉದ್ದಿಮೆಗಳ ಸ್ಥಳೀಕರಣದಿಂದ ಹಲವಾರು ಪ್ರಯೋಜನೆಗಳಿರುವುವು.

೧. ಯಾವ ಸ್ಥಳದಲ್ಲಿ ಒಂದು ದೊಡ್ಡ ಕೈಗಾರಿಕೆ ಪ್ರಾರಂಭವಾಗಿದೆಯೋ ಅಂಥ ಸ್ಥಳ ಬಹಳ ಬೇಗ ಅಭಿವೃದ್ಧಿ ಹೊಂದುವುದು. ಅಲ್ಲಿನ ಸಾರಿಗೆ ವ್ಯವಸ್ಥೆ ಬೆಳೆಯುವುದು. ಊರು ಬೆಳೆದು ನಗರವಾಗುವುದು. ಉದಾ : ಹರಿಹರ, ಭದ್ರಾವತಿ, ದುರ್ಗಾಪುರ ಮೊದಲಾದ ಊರುಗಳೆಲ್ಲಾ ಅಲ್ಲಿನ ಕೈಗಾರಿಕಾ ಸ್ಥಳೀಕರಣದ ಫಲವಾಗಿ ಇಂದು ನಗರಗಳಾಗಿವೆ.

೨. ಸ್ಥಳೀಕರಣದಿಂದ ಬ್ಯಾಂಕುಗಳು, ವಿಮಾಸಂಸ್ಥೆಗಳು ಮತ್ತು ಇತರ ಅನೇಕ ಹಣಕಾಸಿನ ಸಂಸ್ಥೆಗಳ ಬೆಳವಣಿಗೆ ಆಗುತ್ತದೆ.

೩. ವಿವಿಧ ಸ್ಥಳಗಳು ಒಂದೊಂದು ಬಗೆಯ ವಸ್ತುವಿನ ಉತ್ಪಾದನೆಗೆ ಪ್ರಸಿದ್ಧಿಯಾಗುತ್ತವೆ. ಉದಾ : ಹತ್ತಿಯ ಬಟ್ಟೆಗಳಿಗೆ ಮುಂಬಯಿ, ಚರ್ಮದ ಸಾಮಾನುಗಳಿಗೆ ಕಾನ್ಪುರ, ಆಟದ ಸಾಮಾನುಗಳಿಗೆ ಲೂಧಿಯಾನ ಮೊದಲಾಗಿ ಪ್ರಸಿದ್ಧಿಯಾಗಿರುವವು.

೪. ಸ್ಥಳೀಕರಣದ ಮತ್ತೊಂದು ಪ್ರಯೋಜನವೆಂದರೆ, ಕುಶಲ ಕೆಲಸಗಾರರ ಸಂಖ್ಯೆ ಹೆಚ್ಚುವುದು.

೫. ಒಂದು ದೊಡ್ಡ ಪ್ರಮಾಣದ ಉದ್ದಿಮೆ ಸ್ಥಳೀಕರಣವಾದ ಸ್ಥಳದಲ್ಲಿ ಹಲವಾರು ಉಪಉದ್ದಿಮೆಗಳೂ ಬೆಳೆಯುತ್ತವೆ. ಸಕ್ಕರೆ ಕಾರ್ಖಾನೆ ಇರುವಲ್ಲಿ, ಕಾಗದ ತಯಾರಿಕೆ ಮತ್ತು ಮದ್ಯಪಾನೀಯ ತಯಾರಿಕೆಗೆ ಅನುಕೂಲವಾಗುವುದು.

೬. ಸ್ಥಳೀಕರಣದಿಂದ ಸಂಶೋಧನೆಗಳಿಗೆ ಸಹಾಯವಾಗುತ್ತದೆ. ದೊಡ್ಡ ಪ್ರಮಾಣದ ಉತ್ಪಾದನೆಯಿರುವ ಸಂಸ್ಥೆಗಳಲ್ಲಿ ಹೊಸ ಹೊಸ ಸಂಶೋಧನೆಗಳನ್ನು ಮಾಡುವ ಅವಕಾಶಗಳು ಹೆಚ್ಚು ಇರುವುವು.

**ಸ್ಥಳೀಕರಣದ ಹಾನಿಗಳು**

ಕೈಗಾರಿಕೆಗಳ ಸ್ಥಳೀಕರಣದಿಂದ ಪ್ರಯೋಜನಗಳು ಎಷ್ಟು ಇವೆಯೋ ಅಷ್ಟೇ ಹಾನಿಗಳು ಕೂಡ ಇರುವುದಾಗಿ ಕಂಡುಬಂದಿದೆ. ಮುಖ್ಯವಾಗಿ :

೧. ಸ್ಥಳೀಕರಣದಿಂದ ನಿರುದ್ಯೋಗ ಉಂಟಾಗುವ ಸಂಭವ ಹೆಚ್ಚು. ಉದಾ : ಕಲ್ಕತ್ತದಲ್ಲಿ ಸಾವಿರಾರುಮಂದಿ ಸೆಣಬಿನ ಕೈಗಾರಿಕೆಯಲ್ಲಿ ದುಡಿಯುತ್ತಿರುವರು. ಎಲ್ಲಿಯಾದರೂ ಸೆಣಬಿಗೆ ಬೇಡಿಕೆ ಕಡಿಮೆಯಾದರೆ ಹಲವಾರು

ಕಾರ್ಖಾನೆಗಳು ಮುಚ್ಚಲ್ಪಟ್ಟು ಸಾವಿರಾರು ಮಂದಿಗೆ ನಿರುದ್ಯೋಗ ಉಂಟಾಗುವುದು.

೨. ಸ್ಥಳೀಕರಣದಿಂದ ಒಂದುಕಡೆ ಜನಸಂದಣಿ ಅತಿ ಹೆಚ್ಚಾಗಿ ಅವರ ಜೀವನದ ಸೌಲಭ್ಯಗಳಿಗೆ ತೊಡಕುಂಟಾಗುವುದು. ಅಶುಚಿತ್ವ, ಅನಾರೋಗ್ಯ ಮತ್ತು ಸರಿಯಾದ ವಸತಿಗಳ ಅಭಾವ ಮೊದಲಾದವುಗಳು ಉಂಟಾಗುವುವು.

೩. ಸ್ಥಳೀಕರಣದಿಂದ ವಸ್ತುವಿನ ಗುಣಮಟ್ಟ ಕೆಡುವ ಸಂಭವ ಇರುವುದು. ಚರ್ಮದ ವಸ್ತುಗಳಿಗೆ ಹೆಸರಾದ ಕಾನ್ಪುರದಲ್ಲಿ ಕೀಳುಮಟ್ಟದ ಪಾದರಕ್ಷೆಗಳನ್ನು ಕೂಡ ತಯಾರಿಸಿ ಪರಊರುಗಳಿಗೆ ಕಳುಹಿಸುವರು. ಇದು ಹೆಚ್ಚಾದರೆ ಕಾನ್ಪುರ ಚಪ್ಪಲಿಗಳ ಹೆಸರೇ ಕೆಡುವುದು.

೪. ಯುದ್ಧಕಾಲದಲ್ಲಿ ಸ್ಥಳೀಕರಣವಾದಲ್ಲಿಗೆ ಹೆಚ್ಚು ಅಪಾಯ ಸಂಭವಿಸಬಹುದು. ಕಚ್ಚಾಮಾಲುಗಳ ಸಾಗಾಣಿಕೆ ನಿಂತುಹೋದರೆ ಉತ್ಪಾದನೆ ನಿಂತು ದೇಶಕ್ಕೆ ಬಹಳ ನಷ್ಟ ಸಂಭವಿಸುವುದು. ಅಲ್ಲದೆ ಶತ್ರುಗಳು ಯಾವಾಗಲೂ ದೊಡ್ಡ ಪ್ರಮಾಣದ ಕೈಗಾರಿಕೆಗಳಿರುವ ಸ್ಥಳಗಳ ಮೇಲೆ ಕಣ್ಣಿಡುವುದು ಸ್ವಾಭಾವಿಕ.

೫. ಸ್ಥಳೀಕರಣದಿಂದ ಕೇವಲ ಒಂದೇ ಬಗೆಯ ಕೆಲಸಗಾರರಿಗೆ ಮಾತ್ರ ಉದ್ಯೋಗ ದೊರಕುವುದೇ ವಿನಃ ಎಲ್ಲರಿಗೂ ಸಿಗುವುದಿಲ್ಲ.



## ಅಭ್ಯಾಸ ೪

# ಉತ್ಪಾದನಾ ವಿಧಾನ

**ಸರಕು ಮತ್ತು ಸೇವೆ :**

ಮನುಷ್ಯನ ಆರ್ಥಿಕ ಚಟುವಟಿಕೆಗಳ ಮುಖ್ಯ ಗುರಿಯೆಂದರೆ ಅವನ ಬಯಕೆಗಳನ್ನು ತೃಪ್ತಿಪಡಿಸುವುದಾಗಿದೆ. ಮಾನವನ ಅಪೇಕ್ಷೆಗಳಲ್ಲಿ ಮುಖ್ಯ ವಾದವುಗಳೆಂದರೆ ಸರಕು ಮತ್ತು ಸೇವೆಗಳು. ಅರ್ಥಶಾಸ್ತ್ರದಲ್ಲಿ ಮಾನವನ ಇಷ್ಟವನ್ನು ತೃಪ್ತಿಪಡಿಸಬಲ್ಲ ವಸ್ತುಗಳಿಗೆ ಸರಕುಗಳು ಎಂದು ಹೇಳುವರು. ಅದೇ ರೀತಿ ತೃಪ್ತಿಗೊಳಿಸುವ ಎಲ್ಲ ಕೆಲಸಗಳಿಗೆ ಸೇವೆ ಎನ್ನುತ್ತೇವೆ. ಸರಕು ಗಳನ್ನು ಅನೇಕ ಗುಂಪುಗಳನ್ನಾಗಿ ವಿಂಗಡಿಸಬಹುದು.

### ೧. ಪುಕ್ಕಟೆ ಮತ್ತು ಆರ್ಥಿಕ ಸರಕುಗಳು

ಪ್ರಕೃತಿಯಲ್ಲಿ ಯಥೇಚ್ಛವಾಗಿ ದೊರಕುವ ಜೀವನಾವಶ್ಯಕ ವಸ್ತು ಗಳಿಗೆ ಪುಕ್ಕಟೆ ಸರಕುಗಳೆನ್ನುತ್ತೇವೆ. ಉದಾ :—ಗಾಳಿ, ಬೆಳಕು, ನೀರು, ಬಿಸಿಲು ಮುಂತಾದವುಗಳು.

ಹಣದ ವಿನಿಮಯದಿಂದ ದೊರಕುವ ವಸ್ತುಗಳೆಲ್ಲವನ್ನೂ ಆರ್ಥಿಕ ಸರಕುಗಳು ಎನ್ನುತ್ತೇವೆ. ಆರ್ಥಿಕ ವಸ್ತುಗಳೆಲ್ಲವೂ ಮಾನವನಿಂದ ಉತ್ಪಾದಿಸ ಲ್ಪಟ್ಟವುಗಳಾಗಿವೆ. ಇವುಗಳಿಗೆ ಬೆಲೆಯಿರುವುದು, ಮತ್ತು ಇವುಗಳಿಗೆ ಕೊರತೆ ಯಿರುವುದು. ಅದರಿಂದಲೇ ಇವು ಆರ್ಥಿಕವಸ್ತುಗಳಾಗುತ್ತವೆ. ಅಭಾವ ವಿದ್ದಲ್ಲಿ ಪುಕ್ಕಟೆ ವಸ್ತುಗಳು ಕೂಡ ಆರ್ಥಿಕ ವಸ್ತುಗಳಾಗುತ್ತವೆ. ಉದಾ :— ನದಿಯ ನೀರು ಪುಕ್ಕಟೆ ವಸ್ತು ; ಆದರೆ ಅದೇ ನೀರನ್ನು ನಗಳದಲ್ಲಿ ಸರಬ ರಾಯಿ ಮಾಡಿದಾಗ ಅದು ಆರ್ಥಿಕ ವಸ್ತುವಾಗುವುದು.

### ೨. ಭೌತಿಕ ಮತ್ತು ಅಭೌತಿಕ ಸರಕುಗಳು

ಮನುಷ್ಯನ ಕಣ್ಣಿಗೆ ಕಾಣುವ ವಸ್ತುಗಳನ್ನು ಭೌತಿಕ ವಸ್ತುಗಳೆಂದೂ, ಕಣ್ಣಿಗೆ ಕಾಣದ ವಸ್ತುಗಳನ್ನು ಅಭೌತಿಕ ವಸ್ತುಗಳೆಂದೂ ಹೇಳಲಾಗು

ವುದು. ಈ ದೃಷ್ಟಿಯಿಂದ ನೋಡಿದರೆ ಸೇವೆಗಳೆಲ್ಲಾ ಅಭೌತಿಕ ವಸ್ತುಗಳೆಂದಾಗುವುದು.

### ೩. ಗ್ರಾಹಕರ ಮತ್ತು ಉತ್ಪಾದಕರ ಸರಕುಗಳು

ಮನುಷ್ಯನ ಅಪೇಕ್ಷೆಗಳನ್ನು ನೇರವಾಗಿ ತೃಪ್ತಿಪಡಿಸುವ ವಸ್ತುಗಳಿಗೆ ಗ್ರಾಹಕರ ವಸ್ತುಗಳೆಂದು ಹೆಸರು. ಆಹಾರ, ಬಟ್ಟೆ, ವಸತಿ, ಔಷಧಿ ಮೊದಲಾದವುಗಳು ಈ ಗುಂಪಿಗೆ ಸೇರುವುವು. ಈ ವಸ್ತುಗಳನ್ನು ಉತ್ಪಾದಿಸಲು ಬೇಕಾದ ಸರಕುಗಳಿಗೆ ಉತ್ಪಾದಕರ ಸರಕುಗಳು ಎನ್ನುತ್ತೇವೆ. ಉದಾ:— ಯಂತ್ರೋಪಕರಣಗಳು, ಕಚ್ಚಾವಸ್ತುಗಳು ಮುಂತಾದವು. ಕೆಲವು ಸಂದರ್ಭದಲ್ಲಿ ಒಂದೇ ವಸ್ತು ಅದರ ಬಳಕೆಯಲ್ಲಿ ಗ್ರಾಹಕರ ವಸ್ತುವಾಗಬಹುದು, ಮತ್ತು ಉತ್ಪಾದಕರ ವಸ್ತುವೂ ಆಗಬಹುದು. ಉದಾ:— ಭತ್ತವನ್ನು ಆಹಾರಕ್ಕೆ ಉಪಯೋಗಿಸಿದರೆ ಅದು ಗ್ರಾಹಕರ ಸರಕಾಗುವುದು. ಮತ್ತು ಅದೇ ಭತ್ತವನ್ನು ಬೀಜಕ್ಕಾಗಿಟ್ಟುಕೊಂಡರೆ ಉತ್ಪಾದಕರ ಸರಕಾಗುವುದು.

### ೪. ವರ್ಗೀಯ ಮತ್ತು ಅವರ್ಗೀಯ ಸರಕುಗಳು

ಒಬ್ಬ ವ್ಯಕ್ತಿಯಿಂದ ಮತ್ತೊಬ್ಬ ವ್ಯಕ್ತಿಗೆ ವರ್ಗಾಯಿಸಲು ಬರುವ ಸರಕುಗಳಿಗೆ ವರ್ಗೀಯ ಸರಕುಗಳೆಂದೂ, ವರ್ಗಾವಣೆಗೆ ಬಾರದಂತವುಗಳು ಅವರ್ಗೀಯ ಸರಕುಗಳೆಂದೂ ಕರೆಯಲ್ಪಡುವುದು. ಎಲ್ಲಾ ಭೌತಿಕ ವಸ್ತುಗಳು ವರ್ಗೀಯ ಸರಕುಗಳಾಗುವುವು. ವ್ಯಕ್ತಿಯ ಕುಶಲತೆ ಮತ್ತು ಬುದ್ಧಿವಂತಿಕೆ ಅವರ್ಗೀಯವಾದವುಗಳು. ಇವುಗಳನ್ನು ಒಬ್ಬನಿಂದ ಇನ್ನೊಬ್ಬನಿಗೆ ಸಾಗಿಸಲು ಬರುವುದಿಲ್ಲ.

### ೫. ಖಾಸಗಿ ಮತ್ತು ಸಾರ್ವಜನಿಕ ಸರಕುಗಳು

ಯಾವ ಸರಕುಗಳ ಮೇಲೆ ಒಬ್ಬ ವ್ಯಕ್ತಿಯ ಸಂಪೂರ್ಣ ಒಡೆತನ ಇರುವುದೋ ಅಂತಹ ಸರಕುಗಳನ್ನು ಖಾಸಗಿ ಸರಕುಗಳೆನ್ನುವರು. ಸಾರ್ವಜನಿಕ ಉಪಯೋಗಕ್ಕೆ ಇರುವಂತಹ ಉದ್ಯಾನವನಗಳು, ಪಾರ್ಕುಗಳು ಸರ್ಕಾರಿ ವಾಹನಗಳು ಇವೇ ಮೊದಲಾದವುಗಳನ್ನು ಸಾರ್ವಜನಿಕ ಸರಕುಗಳೆಂದು ಕರೆಯಲಾಗುವುದು.

## ೬. ಅವಶ್ಯಕ ಮತ್ತು ವಿಲಾಸನೀಯ ಸರಕುಗಳು

ಜೀವನಕ್ಕೆ ಅತೀ ಅವಶ್ಯಕವಾದ ಆಹಾರ, ಗಾಳಿ, ನೀರು, ಬಟ್ಟೆ, ವಸತಿ ಮೊದಲಾದವುಗಳು ಅವಶ್ಯಕ ವಸ್ತುಗಳೆಂದೆನಿಸುವುದು. ಉನ್ನತ ಜೀವನದ ಮಟ್ಟವನ್ನು ನಡೆಸಲು ಬೇಕಾಗುವ ಭೋಗ ವಸ್ತುಗಳಿಗೆ ವಿಲಾಸನೀಯ ಸರಕುಗಳೆನ್ನುತ್ತಾರೆ. ಇವುಗಳು ಇಲ್ಲದಿದ್ದರೂ ಮನುಷ್ಯನು ಜೀವಿಸಬಹುದು. ಉದಾ: ರೇಡಿಯೋ, ಕಾರು ಮೊದಲಾದವುಗಳು.

## ೭. ವೈಯ್ಯಕ್ತಿಕ ಮತ್ತು ಅವೈಯಕ್ತಿಕ ಸರಕುಗಳು

ಇತರರಿಗೆ ವರ್ಗಾಯಿಸಲು ಬಾರದ ಸರಕುಗಳಿಗೆ ವೈಯಕ್ತಿಕ ಸರಕುಗಳೆಂದೂ ಮತ್ತು ವರ್ಗಾಯಿಸಲು ಬರುವಂತಹ ಎಲ್ಲ ಆರ್ಥಿಕ ವಸ್ತುಗಳಿಗೆ ಅವೈಯಕ್ತಿಕ ಸರಕುಗಳೆಂದೂ ಕರೆಯುವರು.

## ೮. ಏಕೋಪಯೋಗ ಮತ್ತು ಬಹುಉಪಯೋಗ ಸರಕುಗಳು

ಒಂದೇ ಸಲ ಉಪಯೋಗಕ್ಕೆ ಬರುವ ಮತ್ತು ಕೇವಲ ಒಂದು ರೀತಿಯ ಉಪಯೋಗಕ್ಕೆ ಬರುವಂತವುಗಳು ಏಕೋಪಯೋಗ ವಸ್ತುಗಳು. ಯಾವ ಸರಕುಗಳನ್ನು ಪುನಃ ಪುನಃ ಉಪಯೋಗಿಸಬಹುದೋ ಅವುಗಳೆಲ್ಲಾ ಬಹು ಉಪಯೋಗ ಸರಕುಗಳೆನ್ನಿಸುವವು. ಕಾಫಿ, ಚಾ, ಹಣ್ಣುಗಳು, ಏಕೋಪಯೋಗ ಸರಕುಗಳು–ವಾಹನಗಳು, ಕಬ್ಬಿಣ, ಉಕ್ಕು ಮುಂತಾದವು ಬಹುಪಉಯೋಗ ಸರಕುಗಳಾಗುವವು.



## ಅಭ್ಯಾಸ ೫

# ಆರ್ಥಿಕ ಸಂಘಟನೆ

### ೧. ಬೇಸಾಯಕ್ರಮ

ಬೇಸಾಯವು ಜನಜೀವನದ ಅತಿ ಪುರಾತನವಾದ ಮತ್ತು ಅತಿ ಮುಖ್ಯವಾದ ಒಂದು ಉದ್ಯೋಗ. ಇಂದಿಗೂ ಕೂಡ ಹಲವು ರಾಷ್ಟ್ರಗಳಲ್ಲಿ ಬೇಸಾಯವೇ ಮುಖ್ಯವಾದ ಕಸಬು ಆಗಿರುವುದು. ಮಾನವ ಜನಾಂಗಕ್ಕೆ ಅತ್ಯವಶ್ಯಕವಾಗಿ ಬೇಕಾಗುವ ಆಹಾರವಸ್ತುಗಳನ್ನು ಮತ್ತು ಅನೇಕ ಕೈಗಾರಿಕೆಗಳಿಗೆ ಬೇಕಾಗುವ ಕಚ್ಚಾವಸ್ತುಗಳನ್ನು ಬೇಸಾಯವು ಒದಗಿಸಿಕೊಡುವುದು. ಒಟ್ಟಿನಲ್ಲಿ ಹೇಳುವುದಾದರೆ ಬೇಸಾಯವೇ ಮಾನವ ಜನಾಂಗದ ಜೀವಾಳವಾಗಿರುವುದು.

ಹಿಂದಿನ ಕಾಲದಲ್ಲಿ ಜನರು ಜೀವನಾಧಾರಕ್ಕೆ ಕೃಷಿಯನ್ನು ಕೈಗೊಳ್ಳುತ್ತಿದ್ದರು. ಅಂದರೆ ಆಹಾರಧಾನ್ಯ ಮತ್ತು ಬಟ್ಟೆಬರೆಗಳಿಗೆ ಬೇಕಾಗುವ ಅವಶ್ಯಕ ಪದಾರ್ಥಗಳನ್ನು ಸ್ವಪ್ರಯತ್ನದಿಂದ ಬೆಳೆಯುತ್ತಿದ್ದರು. ಕಾಲಕ್ರಮೇಣ ಜೀವನಾಧಾರ ಕೃಷಿಯು ವಾಣಿಜ್ಯ ಬೆಳೆಗಳ ಬೇಸಾಯಕ್ಕೆ ದಾರಿ ಮಾಡಿಕೊಟ್ಟಿತು. ಪೇಟೆಗಳು ಮತ್ತು ಸಾರಿಗೆ ವ್ಯವಸ್ಥೆಗಳು ಹೆಚ್ಚಿದಂತೆ ಬೇಸಾಯ ವಾಣಿಜ್ಯ ರೂಪವನ್ನು ಹೊಂದಿತು.

ಬೇಸಾಯದಮೇಲೆ ಪ್ರಾಕೃತಿಕ ಪ್ರಭಾವ ಬಹಳವಾಗಿರುವುದರಿಂದ ಇದರಲ್ಲಿ ಮಾನವನಿಗೂ ಮತ್ತು ಪ್ರಕೃತಿಗೂ ನೇರವಾದ ಸಂಪರ್ಕ ಇರುವುದು. ಇಂದು ಜಗತ್ತಿನಲ್ಲಿ ಬೇಸಾಯ ಬಹಳ ಪಾಲು ಮುಂದುವರಿದಿರುವುದು. ಹಲವಾರು ಶಾಸಕ ಮತ್ತು ಯಾಂತ್ರಿಕ ಸುಧಾರಣೆಗಳ ಫಲವಾಗಿ ಕೃಷಿ ಕ್ಷೇತ್ರದಲ್ಲಿ ಮಹತ್ತರವಾದ ಕ್ರಿಯೆಯುಂಟಾಗಿರುವುದು. ಭೂಮಿಯ ಒಡೆತನದ ವಿಷಯವಾಗಿ ಮುಖ್ಯವಾದ ಶಾಸಕ ಪರಿವರ್ತನೆಗಳಾಗಿವೆ. ಇಂದಿನ ಯಾಂತ್ರಿಕ ಸಂಶೋಧನೆಗಳು, ಬೆಳೆಗಳನ್ನು ಬದಲುಮಾಡುವ ಕ್ರಮ, ರಾಸಾಯನಿಕ ಶಾಸ್ತ್ರಗಳ ಉಪಯೋಗಗಳು, ನೀರಾವರಿ ಸೌಕರ್ಯಗಳು, ಸಾರಿಗೆ ಸೌಕರ್ಯಗಳು ಇವೇ ಮುಂತಾದವುಗಳು ಕೃಷಿರಂಗವನ್ನೇ ಬದಲುಮಾಡಿವೆ.

ಬೇಸಾಯ ಕ್ರಮವನ್ನು ಮುಖ್ಯವಾಗಿ ನಾಲ್ಕು ಭಾಗಗಳನ್ನಾಗಿ ವಿಂಗಡಿಸಬಹುದು.

೧. ಅಲ್ಪಪ್ರಮಾಣ ಬೇಸಾಯ ಪದ್ಧತಿ

ಇದರಲ್ಲಿ ರೈತನು ತನ್ನ ಕುಟುಂಬದ ಇತರ ಜನರೊಡನೆ ಕೂಡಿಕೊಂಡು ತನ್ನ ಸ್ವಂತ ಹೊಲವನ್ನು ಒಕ್ಕಲುತನ ಮಾಡುವನು. ಭೂಮಿಯ ಹಿಡುವಳಿ ಕಡಿಮೆಯಿರುವಲ್ಲಿ ಈ ಅಲ್ಪಪ್ರಮಾಣ ಕೃಷಿಪದ್ಧತಿಯಿಂದ ಹೆಚ್ಚು ಪ್ರಯೋಜನವನ್ನು ಹೊಂದಬಹುದು. ಆದರೆ ಈ ಕ್ರಮದಿಂದ ಅನೇಕ ಅನಾನುಕೂಲತೆಗಳೂ ಇರುವುದು ಕಂಡುಬಂದಿದೆ. ಸಣ್ಣ ರೈತರಿಗೆ ಹಣದ ಅಭಾವ ಹೆಚ್ಚಾಗಿರುವುದರಿಂದ ಬೇಸಾಯಕ್ಕೆ ಬೇಕಾದ ಸಲಕರಣೆಗಳನ್ನು ಪಡೆಯಲು ಕಷ್ಟವಾಗುವುದು. ಆಧುನಿಕ ಕೃಷಿ ವಿಜ್ಞಾನದ ಸುಧಾರಿತ ಕ್ರಮಗಳನ್ನು ಅನುಸರಿಸಲು ಸಾಧ್ಯವಾಗದಿರುವುದರಿಂದ ಉತ್ಪಾದನೆ ಕಡಿಮೆಯಾಗಿಬಿಡುವುದು. ಸಾಗಣೆ ಮತ್ತು ಮಾರುಕಟ್ಟೆಯ ಪ್ರಯೋಜನಗಳನ್ನು ಕೂಡ ಸಾಕಷ್ಟು ಹೊಂದಲು ಆಗುವುದಿಲ್ಲ.

೨. ಅಧಿಕ ಪ್ರಮಾಣದ ಬೇಸಾಯ ಪದ್ಧತಿ

ಹಲವು ಬೆಳೆಗಳನ್ನು, ಅಂದರೆ ಮುಖ್ಯವಾಗಿ ಭತ್ತ, ಗೋಧಿ, ಜೋಳ, ಕಾಫಿ, ಚಹಾ, ಮುಂತಾದವುಗಳನ್ನು ದೊಡ್ಡಪ್ರಮಾಣದಲ್ಲಿ ಬೆಳೆಸಬಹುದು. ಆರ್ಥಿಕ ದೃಷ್ಟಿಯಿಂದ ಅಧಿಕಪ್ರಮಾಣದ ಬೇಸಾಯ ಪದ್ಧತಿಯಲ್ಲಿ ಹಲವಾರು ಅನುಕೂಲತೆಗಳಿವೆ. ಬೇಸಾಯಕ್ಕೆ ಬೇಕಾಗುವ ಹಣದ ವ್ಯವಸ್ಥೆ ಮತ್ತು ಸುಧಾರಿತ ಬೇಸಾಯ ಕ್ರಮವನ್ನು ಕೈಗೊಳ್ಳಲು ಸಾಧ್ಯವಾಗುವುದು. ಬೇಸಾಯಕ್ಕೆ ಬೇಕಾಗುವ ಸಾಮಗ್ರಿಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಕೊಳ್ಳುವುದರಿಂದ ಅವುಗಳು ಕಡಿಮೆ ಬೆಲೆಗೆ ಸಿಗುವುದು ಅಲ್ಲದೆ ರೈತರು ತಮ್ಮ ಬೆಳೆಯನ್ನು ಒಳ್ಳೆಯ ಬೆಲೆಗೆ ಮಾರಿ ಹೆಚ್ಚು ಲಾಭವನ್ನು ಪಡೆಯಬಹುದು. ಈ ಪದ್ಧತಿಯಲ್ಲಿ ಕಡಿಮೆ ಖರ್ಚಿನಲ್ಲಿ ಅಧಿಕ ಉತ್ಪತ್ತಿಯನ್ನು ಪಡೆಯಲು ಸಾಧ್ಯವಾಗುವುದು.

ಆದರೆ ಕೃಷಿಸಂಪತ್ತು ಯಾವಾಗಲೂ ನಿಸರ್ಗದ ಅನುಕೂಲತೆ ಮತ್ತು ಪ್ರತಿಕೂಲತೆಗಳನ್ನು ಅವಲಂಬಿಸಿರುವುದು. ಹೀಗಿರುವುದರಿಂದ ಬೇಸಾಯ

ಪದ್ಧತಿಯಲ್ಲಿ ಮನುಷ್ಯನ ಪ್ರಯತ್ನಕ್ಕೆ ಸಮನಾದ ಫಲ ದೊರಕುವುದು ಎಂದು ಹೇಳಲು ಬರುವುದಿಲ್ಲ. ಎರಡನೆಯದಾಗಿ ಅಧಿಕ ಪ್ರಮಾಣ ಬೇಸಾಯ ಕ್ರಮದಲ್ಲಿ ವೈಯಕ್ತಿಕ ಶ್ರದ್ಧೆ ಮತ್ತು ಆಸಕ್ತಿಯನ್ನು ಸಾಕಷ್ಟು ಕೊಡಲಾಗುವುದಿಲ್ಲ.

೩. ಸಹಕಾರ ಬೇಸಾಯ ಪದ್ಧತಿ

ಬೇಸಾಯ ಕ್ರಮದಲ್ಲಿ ಸಹಕಾರ ತತ್ವಗಳನ್ನು ಅಳವಡಿಸಿಕೊಂಡು ಒಕ್ಕಲುತನ ಮಾಡಲು ಸಾಕಷ್ಟು ಅವಕಾಶಗಳಿರುವುವು. ಒಕ್ಕಲುತನದ ಸಹಕಾರ ಸಂಘಗಳನ್ನು ಸ್ಥಾಪಿಸಿ ಅವುಗಳ ಮೂಲಕ ಬೇಸಾಯವನ್ನು ಮಾಡಬಹುದು. ಈ ಪದ್ಧತಿಯಲ್ಲಿ ಹಲವಾರು ಸಣ್ಣ ಹಿಡುವಳಿಗಳು ಒಂದಾಗಬೇಕು. ಹೀಗೆ ಒಂದುಗೂಡಿದ ಜಮಿನಿನ ಸಾಗುವಳಿ ಮತ್ತು ಆಡಳಿತ ಕ್ರಮವನ್ನು ಜಮೀನು ಒಡೆಯರ ಮತ್ತು ಕೆಲಸಗಾರರ ಚುನಾಯಿತ ಸದಸ್ಯರ ಒಂದು ಸಮಿತಿಯು ನೋಡಿಕೊಳ್ಳುವುದು. ಸಾಗುವಳಿಯ ಒಟ್ಟು ಉತ್ಪನ್ನವನ್ನು ಒಂದು ನಿಯಮಿತ ರೀತಿಯಲ್ಲಿ ಎಲ್ಲರೂ ಹಂಚಿಕೊಳ್ಳುವರು.

ಸಹಕಾರ ಪದ್ಧತಿಯಲ್ಲಿ ಸಣ್ಣ ಸಣ್ಣ ಹಿಡುವಳಿಗಳನ್ನು ಒಂದುಗೂಡಿಸಿ ಸುಧಾರಿತ ಕ್ರಮದಲ್ಲಿ ಬೇಸಾಯವನ್ನು ಮಾಡುವುದರಿಂದ ಇದು ಹೆಚ್ಚು ಲಾಭದಾಯಕವಾಗಿರುವುದು. ಇದರಿಂದ ಸಣ್ಣ ರೈತರ ವರಮಾನ ಹೆಚ್ಚಾಗುವುದಲ್ಲದೆ ಅವರಿಗೆ ಸಹಕಾರ ಪದ್ಧತಿಯ ಪ್ರಯೋಜನದ ಅರಿವು ಕೂಡ ಆಗುವುದು. ಈ ರೀತಿಯ ಬೇಸಾಯ ಕ್ರಮದಿಂದ ರೈತಾಪಿ ಜನರ ಆರ್ಥಿಕಸ್ಥಿತಿ ಉತ್ತಮಗೊಂಡು, ಅವರ ಸರ್ವತೋಮುಖವಾದ ಏಳಿಗೆಗೆ ಹೆಚ್ಚು ಸಹಾಯಕಾರಿಯಾಗುವುದು.

೪. ಸಾಮೂಹಿಕ ಬೇಸಾಯ ಪದ್ಧತಿ

ಸಾಮೂಹಿಕ ಬೇಸಾಯಕ್ರಮವು ಇಂದು ರಷ್ಯಾದೇಶದಲ್ಲಿ ಪ್ರಚಾರದಲ್ಲಿರುವುದು. ಇದರ ಪ್ರಕಾರ ಒಂದು ಗ್ರಾಮದ ಎಲ್ಲಾ ರೈತರುಗಳು ಸೇರಿ ಆರ್ಟೆಲ್ ಎಂಬ ಸಂಘವನ್ನು ಮಾಡಿಕೊಳ್ಳುವರು. ಎಲ್ಲ ರೈತರು ತಮ್ಮ ಜಮೀನು ಮತ್ತು ಕೃಷಿ ಸಾಧನಗಳನ್ನು ಈ ಸಂಘಕ್ಕೆ ಒಪ್ಪಿಸಿಬಿಡಬೇಕು. ಈ ರೈತಸಂಘದಿಂದ ನೇಮಿಸಲ್ಪಟ್ಟ ಒಂದು ಸಮಿತಿಯು ಇಡೀ ಸಂಘದ

ಆಡಳಿತ ಮತ್ತು ಕೆಲಸಕಾರ್ಯಗಳನ್ನು ನೋಡಿಕೊಳ್ಳುವುದು. ವರ್ಷದಲ್ಲಿ ಯಾವ್ಯಾವ ಬೆಳೆಗಳನ್ನು ಬೆಳೆಯಬೇಕು, ಕೆಲಸದವರಿಗೆ ಸಂಬಳ ಎಷ್ಟು ಕೊಡಬೇಕು, ಬೆಳೆದ ಉತ್ಪತ್ತಿಯನ್ನು ಯಾವಾಗ ಮತ್ತು ಎಲ್ಲಿ ಮಾರಾಟ ಮಾಡಬೇಕು ಎಂದು ಮುಂತಾದ ವಿಷಯಗಳನ್ನೆಲ್ಲಾ ಈ ಸಮಿತಿಯು ನಿರ್ಧಾರ ಮಾಡುವುದು.

ಈ ಸಮಿತಿಯು ಬೇಸಾಯಕ್ಕೆ ಬೇಕಾದ ಎಲ್ಲಾ ಸಾಮಗ್ರಿಗಳನ್ನು ಸರಕಾರದಿಂದ ಬಾಡಿಗೆಗೆ ಪಡೆಯಬಹುದು. ಒಟ್ಟು ಉತ್ಪಾದನೆಯಲ್ಲಿ ಒಂದು ನಿರ್ದಿಷ್ಟವಾದ ಭಾಗವನ್ನು ಸರಕಾರಕ್ಕೆ ತೆರಿಗೆ ಎಂದು ಕೊಡಬೇಕು. ಮುಂದಿನ ವರ್ಷದ ಬೇಸಾಯಕ್ಕೆ ಬೇಕಾಗುವಷ್ಟು ಧಾನ್ಯವನ್ನು ಇಟ್ಟು ಕೊಂಡು ಉಳಿದದ್ದನ್ನು ರೈತರಿಗೆ ಸಂಬಳವಾಗಿ ಕೊಡುವರು.

ಸಾಮೂಹಿಕ ಬೇಸಾಯ ಪದ್ಧತಿ ರಷ್ಯಾದಲ್ಲಿ ಬಹಳ ಚೆನ್ನಾಗಿ ಸಾಗುತ್ತಿದೆ. ಸಣ್ಣ ಸಣ್ಣ ಹಿಡುವಳಿಗಳೆಲ್ಲಾ ಮಾಯವಾಗಿರುವುವು. ಜಮೀನುಗಳು ವಿಶಾಲವಾಗಿರುವುದರಿಂದ ಯಾಂತ್ರಿಕ ಬೇಸಾಯ ಕ್ರಮವನ್ನು ಮಾಡಲು ಹೆಚ್ಚು ಅನುಕೂಲವಾಗಿರುವುದು. ಇದರಿಂದ ರಷ್ಯಾದಲ್ಲಿ ಇಂದು ಆಹಾರೋತ್ಪಾದನೆ ಎಷ್ಟೋಪಾಲು ಹೆಚ್ಚಾಗಿ ಜನರ ಜೀವನದ ಮಟ್ಟ ಬಹಳವಾಗಿ ಸುಧಾರಿಸಿರುವುದು.

ಆದರೆ ಈ ಪದ್ಧತಿಯಿಂದ ಜನರ ಮೂಲಭೂತವಾದ ಸ್ವಂತ ಆಸ್ತಿಯ ಹಕ್ಕಿಗೆ ಕೊಡಲಿಪೆಟ್ಟು ಬಿದ್ದಂತಾಗಿದೆ. ದೇಶದ ರೈತರೆಲ್ಲರೂ ಕೇವಲ ಕೂಲಿಯಾಳುಗಳೇ ವಿನಃ ಭೂಮಿಯ ಮಾಲಿಕರಲ್ಲ. ಭೂಮಿಯ ಒಡೆತನ ಕಾರ್ಪೆಲ್ ಸಂಘಕ್ಕೆ ಸೇರುವುದು. ಇದರಿಂದ ರೈತರಿಗೆ ದುಡಿಮೆಯಲ್ಲಿನ ಉತ್ಸಾಹ ಮತ್ತು ಆಸಕ್ತಿ ಕಡಿಮೆಯಾಗುತ್ತಾ ಬರುವುದು ಸ್ವಾಭಾವಿಕ.

### ಭಾರತದಲ್ಲಿನ ಬೇಸಾಯ ಕ್ರಮ

ಭಾರತ ದೇಶ ಮುಖ್ಯವಾಗಿ ಹಳ್ಳಿಗಳ ದೇಶ. ಈ ರೈತರ ದೇಶದಲ್ಲಿ ಇಂದಿಗೂ ಶೇಕಡ ೭೦ ರಷ್ಟು ಜನರು ಕೃಷಿಯನ್ನೇ ಅವಲಂಬಿಸಿರುವರು. ಇಲ್ಲಿ ಕೃಷಿಯೇ ಮುಖ್ಯ ಉದ್ಯೋಗವಾಗಿದ್ದರೂ ಸಹ, ಇತರ ರಾಷ್ಟ್ರಗಳೊಂದಿಗೆ ಹೋಲಿಸಿದರೆ ನಮ್ಮ ದೇಶ ಒಕ್ಕಲುತನದಲ್ಲಿ ಬಹಳ

ಹಿಂದುಳಿದಿರುವುದು. ಈ ರೀತಿ ಹಿಂದುಳಿದಿರುವುದಕ್ಕೆ ಹಲವಾರು ಪ್ರಾಕೃತಿಕ, ಆರ್ಥಿಕ ಮತ್ತು ಸಾಮಾಜಿಕ ವಿಷಯಗಳು ಕಾರಣವಾಗಿರುವುವು.

**ಪ್ರಾಕೃತಿಕ ಕಾರಣಗಳು**

೧. ನಮ್ಮ ದೇಶದಲ್ಲಿ ಬೇಸಾಯವು ಮುಖ್ಯವಾಗಿ ಮಳೆಯನ್ನು ಅವಲಂಬಿಸಿರುವುದು. ವರ್ಷದಲ್ಲಿ ಮಳೆ ಸರಿಯಾಗಿ, ಸಾಕಷ್ಟು ಮತ್ತು ಸಮಯಕ್ಕೆ ತಕ್ಕಂತೆ ಆಗುವುದು ವಿರಳ. ಅತಿವೃಷ್ಟಿ ಅಥವಾ ಅನಾವೃಷ್ಟಿಗಳುಂಟಾಗುವುದು ಸ್ವಾಭಾವಿಕ.

೨. ಅನೇಕ ಭಾಗಗಳಲ್ಲಿ ಕೊಯ್ಯಲು ಬಂದಿರುವ ಬೆಳೆಗೆ ಹಿಮ ಮತ್ತು ಅನಿರೀಕ್ಷಿತ ಮಳೆ ಬಿದ್ದು ವಿಪರೀತ ನಷ್ಟವುಂಟಾಗುವುದು.

೩. ಪ್ರಕೃತಿಯಲ್ಲಿ ಬೀಳುವ ಕ್ರಿಮಿಕೀಟಗಳು ಬಹುಪಾಲು ಬೆಳೆಯನ್ನು ನಾಶಪಡಿಸುವುದು.

೪. ನಮ್ಮ ದೇಶದಲ್ಲಿ ಬೇರೆ ಬೇರೆಕಡೆಯ ಮಣ್ಣು ಫಲವತ್ತತೆಯಲ್ಲಿ ಕೂಡ ಭಿನ್ನವಾಗಿರುವುದು.

**ಆರ್ಥಿಕ ಕಾರಣಗಳು**

೧. ನಮ್ಮ ದೇಶದಲ್ಲಿ ರೈತರ ಸಂಖ್ಯೆ ಹೆಚ್ಚಿದ್ದು, ಭೂಮಿಯ ಪ್ರಮಾಣ ಕಡಿಮೆಯಿರುವುದರಿಂದ ಬೇಸಾಯವು ಕೇವಲ ಅಲ್ಪಪ್ರಮಾಣದಲ್ಲಿ ಮಾತ್ರ ಸಾಗುತ್ತದೆ. ಇದರಿಂದ ಹೆಚ್ಚು ಉತ್ಪಾದನೆ ಆಗುತ್ತಿಲ್ಲ.

೨. ಬಿತ್ತನೆಯ ಬೀಜದ ಬಗ್ಗೆ ರೈತರು ಹೆಚ್ಚು ಎಚ್ಚರ ವಹಿಸುವುದಿಲ್ಲ. ಸುಧಾರಿತ ಬೀಜಗಳು ದೇಶದಲ್ಲಿರುವ ಎಲ್ಲಾ ರೈತರಿಗೆ ದೊರಕುವುದಿಲ್ಲ.

೩. ಬೇಸಾಯ ಅಲ್ಪಪ್ರಮಾಣದಲ್ಲಿ ಇರುವುದರಿಂದ ಆಧುನಿಕ ಉಪಕರಣಗಳ ಪ್ರಯೋಜನವನ್ನು ರೈತರು ಹೊಂದಲು ಸಾಧ್ಯವಿಲ್ಲ.

೪. ದೇಶದಲ್ಲಿ ಸಾಕಷ್ಟು ನೀರಾವರಿ ಸೌಲಭ್ಯವಿರುವುದಿಲ್ಲ. ನೀರಾವರಿ ಇರುವಲ್ಲಿ ಅದರ ಸದುಪಯೋಗವನ್ನು ರೈತರು ಮಾಡಿಕೊಳ್ಳುತ್ತಿಲ್ಲ.

೫. ನಮ್ಮ ಬಡರೈತರಿಗೆ ಹಣದ ವ್ಯವಸ್ಥೆ ಸರಿಯಾಗಿರುವುದಿಲ್ಲ. ಇದರಿಂದ ರೈತರು ಸಾಹುಕಾರರಿಂದ ಯಥೇಚ್ಛವಾದ ಬಡ್ಡಿ ದರಕ್ಕೆ ಸಾಲ ಪಡೆದು, ಜೀವಮಾನವಿಡೀ ಕಷ್ಟಪಡುವರು.

೬. ನಮ್ಮ ದೇಶದ ಹಣವಂತರು ಬೇಸಾಯದ ಕಡೆ ಹೆಚ್ಚು ಗಮನ ಕೊಡುವುದಿಲ್ಲ. ಬರೀ ವ್ಯಾಪಾರ ಉದ್ದಿಮೆಗಳಲ್ಲಿ ಹಣವನ್ನು ಹಾಕಿ ಅಧಿಕ ಲಾಭ ಪಡೆಯಲು ಪ್ರಯತ್ನಿಸುವರು.

೭. ನಮ್ಮ ದೇಶದಲ್ಲಿನ ರೈತರ ಉತ್ಪಾದನೆಗೆ ಸರಿಯಾದ ಮಾರುಕಟ್ಟೆ ಇರುವುದಿಲ್ಲ. ಇದರಿಂದ ರೈತರಲ್ಲಿ ಶ್ರದ್ಧೆ ಮತ್ತು ಆಸಕ್ತಿ ಹೋಗಿಬಿಡುವುದು.

೮. ನಮ್ಮ ದೇಶದ ರೈತರಲ್ಲಿ ಹೆಚ್ಚಿನ ಪಾಲು ಸ್ವಂತ ಹಿಡುವಳಿಯಿಲ್ಲ ದವರು. ಉಳುವವನೇ ಒಡೆಯನಾದರೆ ಬೇಸಾಯಮಾಡುವುದರಲ್ಲಿ ಜನರಿಗೆ ಉತ್ಸಾಹ ಹೆಚ್ಚುವುದು ಸಹಜ.

೯. ನಮ್ಮ ದೇಶದ ರೈತರು ಅವಿದ್ಯಾವಂತರೂ ಮತ್ತು ಸಂಪ್ರದಾಯ ಬದ್ಧರೂ ಆಗಿರುವುದರಿಂದ, ಬೇಸಾಯವನ್ನು ಕೇವಲ ಹೊಟ್ಟೆಪಾಡಿಗಾಗಿ ಮಾಡುವರೇ ಹೊರತು ವ್ಯಾಪಾರದ ದೃಷ್ಟಿಯಿಂದಲ್ಲ.

ಇವೆಲ್ಲಾ ಲೋಪದೋಷಗಳು ನಿವಾರಣೆಯಾದಲ್ಲಿ ನಮ್ಮ ಕೃಷಿ ಸಮೃದ್ಧವಾಗಿರುವ ಭಾರತದೇಶ ನಿಜಕ್ಕೂ ಸಂಪತ್ಸಮೃದ್ಧಿಯ ನಾಡಾಗು ವುದು. ಬೇಸಾಯಕ್ರಮದಲ್ಲಿ ಮತ್ತು ಆಹಾರೋತ್ಪಾದನೆಯಲ್ಲಿ ಜಗತ್ತಿನಲ್ಲೇ ಪ್ರಥಮಸ್ಥಾನವನ್ನು ಪಡೆಯುವುದು ಎಂದರೆ ಅತಿಶಯೋಕ್ತಿಯಾಗಲಾರದು.

## ೨. ಗಣಿ ಕೈಗಾರಿಕೆ

ಬೇಸಾಯದಂತೆ ಖನಿಜೋತ್ಪತ್ತಿ ಕೂಡ ಮಾನವನ ಒಂದು ಮುಖ್ಯ ವಾದ ಉದ್ಯೋಗವಾಗಿರುವದು. ಭೂಮಿಯೊಳಗಿಂದ ಸಂಪತ್ತನ್ನು ಉತ್ಪಾದನೆ ಮಾಡುವ ಕೆಲಸವೇ ಗಣಿಕೈಗಾರಿಕೆ ಎಂದೆನಿಸುವುದು. ಭೂಮಂಡಲದಲ್ಲಿ ಮನುಷ್ಯನ ಉಪಯೋಗಕ್ಕೆ ಬೇಕಾದಂತಹ ಲೋಹಗಳ ಅದಿರು, ಕಲ್ಲಿದ್ದಲು, ಎಣ್ಣೆ ಮೊದಲಾದ ಖನಿಜಸಂಪತ್ತು ಹೇರಳವಾಗಿರುವುದು.

ಗಣಿಕೈಗಾರಿಕೆ ಎಲ್ಲ ಕಡೆಗಳಲ್ಲಿ ಇರಲು ಸಾಧ್ಯವಿಲ್ಲ. ಖನಿಜಗಳು ಎಲ್ಲೆಲ್ಲಿ ಸಿಗುತ್ತವೋ ಅಲ್ಲಿಮಾತ್ರ ಗಣಿಗಳನ್ನು ಅಗೆಯಲಾಗುತ್ತದೆ. ಅಲ್ಲದೆ ಗಣಿಗಳಲ್ಲಿ ಕೆಲಸಮಾಡುವಂತವರು ಬಹಳ ಸಮಯ ತಮ್ಮ ಮನೆ ಮಠ ಗಳನ್ನು ಬಿಟ್ಟು ದೂರಹೋಗಿ ಕೆಲಸಮಾಡಬೇಕಾಗುವುದು. ಅವರ ಕೆಲಸ ಬಹಳ ಕಷ್ಟಕರದ್ದಿದ್ದು ಸಾವಿನೊಂದಿಗೆ ಹೋರಾಟ ನಡೆಸಬೇಕಾಗಿದೆ.

ಗಣಿ ಕೈಗಾರಿಕೆ ಯಾವಾಗಲೂ ಒಂದು ವ್ಯವಸ್ಥಿತ ರೀತಿಯಲ್ಲಿ ಸಾಗಬೇಕು. ಇದನ್ನು ಪ್ರಾರಂಭಿಸಬೇಕಾದರೆ ಮೊದಲು ಖನಿಜಗಳು ಎಲ್ಲೆಲ್ಲಿ ದೊರಕುತ್ತವೆ ಎಂದು ಶೋಧನೆ ಮಾಡಬೇಕು. ನಂತರ ಯಂತ್ರ ಮತ್ತು ಕೆಲಸಗಾರರ ಸಹಾಯದಿಂದ ಗಣಿಗಳನ್ನು ಅಗೆಯಬೇಕಾಗುವುದು.

ಬೇಸಾಯ ಪದ್ಧತಿಯಲ್ಲಿ ಭೂಮಿಯನ್ನು ಗುತ್ತಿಗೆ ಪಡೆಯುವ ರೀತಿಯಲ್ಲಿ ಗಣಿ ಕೈಗಾರಿಕೆಯಲ್ಲಿ ಕೂಡ ಖನಿಜಗಳು ದೊರಕುವ ಭೂಮಿಯನ್ನು ಭೂ ಮಾಲಿಕನಿಂದ ಗುತ್ತಿಗೆ ಪಡೆಯಬಹುದು. ಗಣಿ ಕೈಗಾರಿಕೆಯ ಗುತ್ತಿಗೆದಾರನು ಖನಿಜಗಳನ್ನು ತೆಗೆದುಕೊಳ್ಳಲು ನೆಲದ ಒಡೆಯನಿಗೆ ಕೊಡುವ ಹಣಕ್ಕೆ 'ರಾಯಲ್ಟಿ' ಎಂದು ಹೆಸರು. ಗಣಿಯಲ್ಲಿ ಖನಿಜ ಸಂಪತ್ತು ಅಧಿಕವಾಗಿದ್ದರೆ ರಾಯಲ್ಟಿ ಕೂಡ ಹೆಚ್ಚು ಸಿಗುವುದು.

ಗಣಿಗಳನ್ನು ಅಗೆಯಲು ಬಂಡವಾಳ ಹೆಚ್ಚಾಗಿ ಬೇಕಾಗಿರುವುದರಿಂದ ಸಾಮಾನ್ಯವಾಗಿ ಇವುಗಳನ್ನು ಕೂಡು ಬಂಡವಾಳ ಸಂಸ್ಥೆಗಳು ಕೈಗೊಳ್ಳುವುವು. ಇಂತಹ ಸಂಸ್ಥೆಗಳು ಕೂಡ ಭೂಮಿಯ ಮಾಲೀಕನಿಗೆ ಕೆಲವು ಷೇರುಗಳನ್ನು ಕೊಡುತ್ತವೆ. ಈ ಷೇರುಗಳ ಮೇಲೆ ಬರುವ ಲಾಭವೇ ನೆಲದ ಒಡೆಯನ ವರಮಾನ. ಈ ರೀತಿ ಕೂಡು ಬಂಡವಾಳ ಸಂಸ್ಥೆಗಳು ಖನಿಜಗಳುಇರುವ ಭೂಮಿಯ ಮಾಲೀಕನಿಗೆ ಕೊಡುವ ಷೇರುಗಳಿಗೆ 'ವೆಂಡರ್ಸ್ ಷೇರು'ಗಳೆಂದು ಹೆಸರು.

ಭಾರತದಲ್ಲಿ ಖನಿಜ ಸಂಪತ್ತು ಹೇರಳವಾಗಿರುವುದು. ಕಬ್ಬಿಣದ ಅದಿರು, ಕಲ್ಲಿದ್ದಲು, ಚಿನ್ನ, ತಾಮ್ರ, ಮ್ಯಾಂಗನೀಸ್, ಅಭ್ರಕ ಮತ್ತು ಖನಿಜ ಲವಣ ಇವೇ ನಮ್ಮಲ್ಲಿನ ಮುಖ್ಯ ಖನಿಜಗಳು. ನಮ್ಮ ದೇಶದಲ್ಲಿ ಬ್ರಿಟಿಷರ ಆಳ್ವಿಕೆಯಿದ್ದಾಗ ದೇಶದಲ್ಲಿದ್ದ ಮುಖ್ಯವಾದ ಗಣಿಗಳೆಲ್ಲವೂ ಅವರ ಅಧೀನದಲ್ಲಿದ್ದವು. ಅವುಗಳಿಂದ ಬಂದ ಲಾಭವೆಲ್ಲಾ ಪರದೇಶಗಳಿಗೆ ಹೋಗುತಿತ್ತು. ೧೯೪೮ ರಲ್ಲಿ ಸ್ವತಂತ್ರ ಭಾರತ ಸರಕಾರವು "ಇಂಡಿಯನ್ ಬ್ಯೂರೋ ಆಫ್ ಮೈನ್ಸ್" ಎಂಬ ಸಂಸ್ಥೆಯನ್ನು ಸ್ಥಾಪನೆ ಮಾಡಿದೆ. ದೇಶದ ಖನಿಜ ಸಂಪತ್ತಿನ ಅಭಿವೃದ್ಧಿಯ ಕಾರ್ಯಗಳನ್ನು ಈ ಸಂಸ್ಥೆ ನೋಡಿಕೊಳ್ಳುವಂತಾಯಿತು. ಇಂದು ನಮ್ಮ ದೇಶದಲ್ಲಿ ಸುಮಾರು ೬೦ ಕೋಟಿ ರೂಪಾಯಿ ಬೆಲೆಯ ಖನಿಜೋತ್ಪತ್ತಿಯಾಗುತ್ತಿದೆ. ೧೯[illegible]ರಲ್ಲಿ

ಸರಕಾರವು "ರಾಷ್ಟ್ರೀಯ ಖನಿಜಾಭಿವೃದ್ಧಿ ಕಾರ್ಪೊರೇಷನ್" ಎಂಬ ಸಂಸ್ಥೆಯನ್ನು ಸ್ಥಾಪಿಸಿರುವುದು. ನಮ್ಮ ದೇಶದಲ್ಲಿ ಗಣಿ ಕೈಗಾರಿಕೆಗೆ ಒಳ್ಳೆಯ ಭವಿಷ್ಯ ಇರುವುದು.

## ೩. ತಯಾರಿಕಾ ವ್ಯವಸ್ಥೆ

ಹಿಂದಿನ ಕಾಲದಲ್ಲಿ ವಸ್ತುಗಳನ್ನು ಮನೆಗಳಲ್ಲೇ ತಯಾರಿಸುತ್ತಿದ್ದರು. ಅವುಗಳನ್ನು ತಯಾರಿಸಲು ಸಾಮಾನ್ಯವಾದ ಉಪಕರಣಗಳನ್ನು ಬಳಸುತ್ತಿದ್ದರು. ಆಗಿನ ಕಾಲದಲ್ಲಿ ಯಂತ್ರಗಳ ಉಪಯೋಗ ಇರಲಿಲ್ಲ. ಸಣ್ಣ ಪ್ರಮಾಣದಲ್ಲಿ ತಯಾರಾದ ವಸ್ತುಗಳನ್ನು ತಾವೇ ಬಳಸಿಕೊಳ್ಳುತ್ತಿದ್ದರು. ಆದರೆ ಇಂದು ಸಣ್ಣ ಪ್ರಮಾಣದ ಉತ್ಪಾದನೆ ಹೋಗಿ ಅಧಿಕ ಪ್ರಮಾಣದ ಉತ್ಪಾದನೆ ಅವಶ್ಯಕವಾಗಿರುವುದು. ಕೈಗಾರಿಕೆಗಳು ಕೌಟುಂಬಿಕ ಹಂತದಿಂದ ಕಾರ್ಖಾನೆಯ ಹಂತಕ್ಕೆ ಹೋದವು. ೧೮ ನೇ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ನಡೆದ ಕೈಗಾರಿಕಾ ಕ್ರಾಂತಿಯ ಪರಿಣಾಮವಾಗಿ ಕೈಗಾರಿಕೆಯಲ್ಲಿ ಯಂತ್ರಗಳ ಬಳಕೆ ಆರಂಭವಾಯಿತು. ದೇಶದ ಎಲ್ಲಾ ಕಡೆಗಳಲ್ಲಿ ದೊಡ್ಡ ದೊಡ್ಡ ಕಾರ್ಖಾನೆಗಳು ಸ್ಥಾಪಿತವಾಗಿ ಇಡೀ ತಯಾರಿಕಾ ವ್ಯವಸ್ಥೆ ಯಾಂತ್ರೀಕರಣವಾಯಿತು.

ದೊಡ್ಡ ಪ್ರಮಾಣದ ಕೈಗಾರಿಕೆಗಳನ್ನು ನಡೆಸಲು ಕೂಡು ಬಂಡವಾಳ ಸಂಸ್ಥೆಗಳಿಗೆ ಮಾತ್ರ ಸಾಧ್ಯವಿರುವುದು. ದೊಡ್ಡ ದೊಡ್ಡ ಕಾರ್ಖಾನೆಗಳನ್ನು ಸ್ಥಾಪಿಸಿ ಅಧಿಕಪ್ರಮಾಣದಲ್ಲಿ ಉತ್ಪಾದನೆ ಮಾಡಲು ತೊಡಗಿದಾಗ ಹಲವಾರು ಸಮಸ್ಯೆಗಳು ತಲೆ ಎತ್ತುವುವು. ಮುಖ್ಯವಾದ ಸಮಸ್ಯೆ ಯೆಂದರೆ ಕಾರ್ಖಾನೆಯ ಸುಗಮವಾದ ಸಂಘಟನಾ ವ್ಯವಸ್ಥೆ. ಇದಕ್ಕೆ ಕೂಡು ಬಂಡವಾಳ ಸಂಸ್ಥೆಯ ಪಾಲುದಾರರು ಮೊದಲು ಒಂದು ಕಾರ್ಯ ನಿರ್ವಾಹಕ ಮಂಡಳಿಯನ್ನು ರಚಿಸುವುದು. ಈ ಮಂಡಳಿಗೆ ಕಾರ್ಖಾನೆಯ ಆಡಳಿತವನ್ನು ಒಪ್ಪಿಸಲಾಗುವುದು. ಈ ಕಾರ್ಯನಿರ್ವಾಹಕ ಮಂಡಳಿಯು ಒಬ್ಬ ಮೇನೇಜಿಂಗ್ ಡೈರೆಕ್ಟರನನ್ನು ನೇಮಕಮಾಡುತ್ತದೆ. ಈತನು ಕಾರ್ಖಾನೆಯ ಆಡಳಿತ ವ್ಯವಸ್ಥೆಯನ್ನು ದಕ್ಷತೆಯಿಂದ ನೋಡಿಕೊಳ್ಳಬೇಕಾಗುವುದು.

ಒಂದು ಕಾರ್ಖಾನೆಯಲ್ಲಿ ಅನೇಕ ರೀತಿಯ ಕೆಲಸಕಾರ್ಯಗಳಿರುತ್ತವೆ. ಒಂದೊಂದು ಬಗೆಯ ಕೆಲಸವನ್ನು ಮಾಡಲು ಬೇರೆ ಬೇರೆಯ ಶಾಖೆಗಳಿರುತ್ತವೆ. ಆಧುನಿಕ ಕಾರ್ಖಾನೆಯ ಆಂತರಿಕ ವ್ಯವಸ್ಥೆಯನ್ನು ನೋಡಿಕೊಳ್ಳಲು ಹಲವಾರು ಶಾಖೆಗಳಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ—

೧. ಉತ್ಪಾದನಾ ಶಾಖೆ.
೨. ಎಂಜಿನಿಯರಿಂಗ್ ಶಾಖೆ.
೩. ವ್ಯಾಪಾರ ಶಾಖೆ.
೪. ಉದ್ಯೋಗ ಶಾಖೆ.
೫. ಕಾರ್ಮಿಕರ ಕ್ಷೇಮಾಭ್ಯುದಯ ಶಾಖೆ.
೬. ಲೆಕ್ಕ ಪರೀಕ್ಷಕ ಶಾಖೆ.
೭. ವ್ಯವಹಾರ ಶಾಖೆ.
೮. ಸಂಶೋಧನಾ ಶಾಖೆ.

ಪ್ರತಿಯೊಂದು ಶಾಖೆಯ ಕೆಲಸ ಕಾರ್ಯಗಳನ್ನು ನೋಡಿಕೊಳ್ಳಲು ಒಬ್ಬೊಬ್ಬ ಮಾನೇಜರ್ ಇರುವನು. ಈ ಎಲ್ಲಾ ಶಾಖೆಗಳ ಮ್ಯಾನೇಜರುಗಳು ಕಾರ್ಖಾನೆಯ ಮೇನೇಜಿಂಗ್ ಡೈರೆಕ್ಟರನ ಅಧೀನದಲ್ಲಿ ಇದ್ದು ಕೆಲಸ ಕಾರ್ಯಗಳನ್ನು ನೋಡಿಕೊಳ್ಳುವರು.

ಒಂದು ಕಾರ್ಖಾನೆಯ ಆಂತರಿಕ ಕೆಲಸಕಾರ್ಯಗಳು ಈ ಕೆಳಗಿನಂತೆ ನಡೆಯುವುವು.

೧. ಉತ್ಪಾದನಾ ಶಾಖೆ: ಈ ಶಾಖೆಗೆ ಒಬ್ಬ ವರ್ಕ್ಸ್ ಮೇನೇಜರನು ಇರುವನು. ಇವನು ಕಾರ್ಖಾನೆಯ ಕೆಲಸದ ಎಲ್ಲಾ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವನು. ಕಾರ್ಖಾನೆಯಲ್ಲಿನ ತಯಾರಿಕಾ ರೀತಿ ಮತ್ತು ಕೆಲಸಗಾರರ ಸಂಖ್ಯೆಯ ನಿರ್ಣಯ ಮೊದಲಾದುವನ್ನು ಈತನೇ ನಿರ್ಧರಿಸಬೇಕಾಗಿದೆ.

೨. ಎಂಜಿನಿಯರಿಂಗ್ ಶಾಖೆ: ಕಾರ್ಖಾನೆಯಲ್ಲಿ ದೊಡ್ಡ ದೊಡ್ಡ ಯಂತ್ರಗಳು ಮತ್ತು ವಿದ್ಯುತ್ತನ್ನು ಬಳಸುವುದರಿಂದ ಎಂಜಿನಿಯರಿಂಗ್ ಶಾಖೆ ಅವಶ್ಯಕವಾಗಿ ಬೇಕಾಗುತ್ತದೆ. ಯಂತ್ರಗಳನ್ನು ಸರಿಯಾಗಿಟ್ಟುಕೊಳ್ಳುವುದೇ ಈ ಶಾಖೆಯ ಮುಖ್ಯ ಕೆಲಸ.

೩. ವ್ಯಾಪಾರ ಶಾಖೆ: ಉತ್ಪಾದನೆಗೆ ಬೇಕಾಗುವ ಕಚ್ಚಾ ಪದಾರ್ಥಗಳನ್ನು ತರುವುದು, ಮತ್ತು ತಯಾರಿಸಲ್ಪಟ್ಟ ವಸ್ತುಗಳನ್ನು ಸರಿಯಾದ ಬೆಲೆಗೆ ಮಾರುವುದು ಈ ಶಾಖೆಯ ಕೆಲಸವಾಗಿರುವುದು.

೪. ಉದ್ಯೋಗ ಶಾಖೆ: ಈ ಶಾಖೆಯು ಯೋಗ್ಯ ಕೆಲಸಗಾರರನ್ನು ಆರಿಸಿ ಅವರನ್ನು ಅವರವರ ಯೋಗ್ಯತೆಗೆ ತಕ್ಕಂತೆ ಕಾರ್ಖಾನೆಯಲ್ಲಿ ವಿವಿಧ ಶಾಖೆಗಳಲ್ಲಿ ಕೆಲಸಕ್ಕೆ ಹಚ್ಚುವುದು ಇದರ ಮುಖ್ಯ ಕರ್ತವ್ಯವಾಗಿರುವುದು.

೫. ಕಾರ್ಮಿಕರ ಕ್ಷೇಮಾಭ್ಯುದಯ ಶಾಖೆ: ಕಾರ್ಖಾನೆಯಲ್ಲಿನ ಕೆಲಸಗಾರರ ಕ್ಷೇಮಾಭ್ಯುದಯಗಳನ್ನು ನೋಡಿಕೊಳ್ಳಲು ಈ ಶಾಖೆ ಇರುವುದು. ಇದು ಕಾರ್ಮಿಕರ ಕುಂದುಕೊರತೆಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಹೋಗಲಾಡಿಸಿ, ಅವರಿಗೆ ತಮ್ಮ ಕೆಲಸದಲ್ಲಿ ಉತ್ಸಾಹವನ್ನುಂಟು ಮಾಡಲು ಪ್ರಯತ್ನಿಸುವುದು.

೬. ಲೆಕ್ಕ ಪರೀಕ್ಷಕ ಶಾಖೆ: ಕಾರ್ಖಾನೆಯಲ್ಲಿ ಆಗುವ ಖರ್ಚು ವೆಚ್ಚಗಳನ್ನು ಈ ಶಾಖೆಯಲ್ಲಿ ಇಡಲಾಗುವುದು. ವಸ್ತುಗಳ ತಯಾರಿಕೆಯ ಖರ್ಚು ಮತ್ತು ಅವುಗಳ ಲಾಭದಾಯಕ ಬೆಲೆಗಳನ್ನು ಈ ಶಾಖೆ ನಿಗದಿಪಡಿಸುವುದು.

೭. ವ್ಯವಹಾರ ಶಾಖೆ: ಕೂಡು ಬಂಡವಾಳ ಕಂಪನಿಯ ಮತ್ತು ಕಾರ್ಖಾನೆಯ ಎಲ್ಲಾ ಪತ್ರವ್ಯವಹಾರಗಳನ್ನು ಇಲ್ಲಿ ಮಾಡಲಾಗುವುದು. ಸರಕುಗಳ ಬಗ್ಗೆ ಜಾಹೀರಾತುಗಳನ್ನು ಕೊಡುವುದು, ದೇಶೀಯ ಮತ್ತು ವಿದೇಶೀಯ ಸರಕಾರಗಳೊಂದಿಗೆ ವ್ಯವಹರಿಸುವುದು ಇವೇ ಮೊದಲಾದ ವ್ಯವಹಾರಿಕ ಕಾರ್ಯಗಳನ್ನು ಇಲ್ಲಿ ಮಾಡಲಾಗುವುದು.

೮. ಸಂಶೋಧನಾ ಶಾಖೆ: ದೊಡ್ಡ ಪ್ರಮಾಣದ ಕೈಗಾರಿಕಾ ಪ್ರಗತಿಗೆ ಸಂಶೋಧನೆಯು ಅತಿ ಮುಖ್ಯವಾದುದು. ವಸ್ತುಗಳ ಗುಣಮಟ್ಟವನ್ನು ಅಭಿವೃದ್ಧಿಪಡಿಸಲು ಮತ್ತು ಉತ್ಪಾದನೆಯನ್ನು ಹೊಸರೀತಿಯಲ್ಲಿ ಮಾಡಲು ಸಂಶೋಧನೆ ಅತಿ ಸಹಾಯಕಾರಿಯಾಗಿರುವುದು.

ಈ ರೀತಿ ಅಧಿಕಪ್ರಮಾಣದ ಉತ್ಪಾದನೆಯಲ್ಲಿ ತೊಡಗಿರುವ ಕಾರ್ಖಾನೆಗಳ ಆಡಳಿತ ವ್ಯವಸ್ಥೆ ಸರಿಯಾಗಿ ನಡೆಯುತ್ತಿರುವುದು.

## ೪. ಸಾರಿಗೆ ಅಥವಾ ಸಂಚಾಲನಾ ವ್ಯವಸ್ಥೆ

ಒಂದು ದೇಶದ ಸರ್ವತೋಮುಖವಾದ ಅಭಿವೃದ್ಧಿಗೆ ಆ ದೇಶದಲ್ಲಿನ ಸಾರಿಗೆ ವ್ಯವಸ್ಥೆ ಮಹತ್ತರವಾದ ಪಾತ್ರವನ್ನು ವಹಿಸುವುದು. ರಾಷ್ಟ್ರದ ಆರ್ಥಿಕ ಮತ್ತು ಸಾಮಾಜಿಕ ಪ್ರಗತಿಗೆ ಸರಿಯಾದ ಸಾರಿಗೆ ವ್ಯವಸ್ಥೆ ಅತೀ ಮುಖ್ಯವಾದುದಾಗಿದೆ. ಸಂಚಾರಸಲಕರಣೆಗಳನ್ನು ಒಂದು ದೇಶದ ನರನಾಡಿಗಳೆಂದು ಕರೆಯಬಹುದು. ಸಂಚಲನಾವ್ಯವಸ್ಥೆಯಲ್ಲಿ ಮುಖ್ಯವಾಗಿ ಎರಡು ಅಂಶಗಳು ಸೇರಿರಬೇಕು. ಒಂದನೆಯದು ವಾಹನಗಳು ಮತ್ತು ಎರಡನೆಯದು ವಾಹನಗಳಿಗೆ ಬೇಕಾಗುವ ರಸ್ತೆಮಾರ್ಗಗಳು. ಹಿಂದಿನಕಾಲದಲ್ಲಿ ಪ್ರಾಣಿಗಳೇ ಮುಖ್ಯವಾಹನ ಸಾಧನಗಳಾಗಿದ್ದು ರಸ್ತೆಗಳು ಮಾತ್ರ ಮಾರ್ಗಗಳಾಗಿದ್ದವು. ಆದರೆ ಇಂದು ಮೋಟಾರು, ರೈಲು, ಹಡಗು, ವಿಮಾನ ಮುಂತಾದ ವಾಹನಗಳೂ ಮತ್ತು ಅವುಗಳಿಗೆ ತಕ್ಕಂತೆ ರಸ್ತೆಮಾರ್ಗ, ರೈಲುಮಾರ್ಗ, ಜಲಮಾರ್ಗ ಮತ್ತು ವಾಯುಮಾರ್ಗಗಳಿವೆ.

ರಸ್ತೆಮಾರ್ಗವು ಬಹಳ ಪುರಾತನಕಾಲದಿಂದಲೂ ಇರುವ ಸಂಚಾರ ಮಾರ್ಗವಾಗಿರುವುದು. ಇಂದು ಮೋಟಾರು ಸಾಗಣೆಯ ಮಹತ್ವ ಅತಿ ಹೆಚ್ಚಾಗಿರುವುದು. ಎಲ್ಲಾ ದೇಶಗಳಲ್ಲೂ ರಸ್ತೆಗಳನ್ನು ಸರಕಾರ ಅಥವಾ ಕೆಲವು ಸಾರ್ವಜನಿಕ ಸಂಸ್ಥೆಗಳು ನಿರ್ಮಾಣ ಮಾಡುತ್ತವೆ. ಇವುಗಳನ್ನು ಉಪಯೋಗಿಸುವ ವಾಹನಗಳು ರಸ್ತೆತೆರಿಗೆಯನ್ನು ಕೊಡಬೇಕಾಗುವುದು. ರಸ್ತೆ ಸಾರಿಗೆ ವ್ಯವಸ್ಥೆಯ ಮುಖ್ಯ ಅನುಕೂಲವೆಂದರೆ ಇವುಗಳ ಮೂಲಕ ಹಳ್ಳಿಹಳ್ಳಿಗೂ ಮತ್ತು ಪ್ರತಿಯೊಂದು ಮನೆಮನೆಗೂ ಸಾಮಾನು ಸರಕುಗಳನ್ನು ಒಯ್ಯಬಹುದಾಗಿದೆ.

ರೈಲು ಮಾರ್ಗಗಳು ೧೯ ನೇ ಶತಮಾನದಲ್ಲಿ ಉಂಟಾದವುಗಳಾಗಿವೆ. ಇಂದು ಭೂ ಸಂಚಲನಾ ವ್ಯವಸ್ಥೆಯಲ್ಲಿ ರೈಲು ಮಾರ್ಗಗಳ ಪಾತ್ರವೇ ಮಹತ್ತರವಾದುದು. ಈಗಿನ ಕಾಲದಲ್ಲಿ ಅಧಿಕ ಪ್ರಮಾಣದಲ್ಲಿ ಜನರು ಮತ್ತು ಸರಕುಗಳು ರೈಲ್ವೆಗಳ ಮೂಲಕವೇ ಒಂದು ಕಡೆಯಿಂದ ಮತ್ತೊಂದು ಕಡೆಗೆ ಒಯ್ಯಲ್ಪಡುತ್ತಿವೆ. ರೈಲ್ವೆಗಳನ್ನು ಹಾಕಲು ಹೆಚ್ಚು ಬಂಡವಾಳ ಬೇಕಾಗುವುದು. ಆದರಿಂದಲೇ ಸರಕಾರದ ಸಹಾಯವಿಲ್ಲದೆ ಇದನ್ನು ಮಾಡಲು ಸಾಧ್ಯವಾಗುವುದಿಲ್ಲ.

ಜಲಮಾರ್ಗಗಳು ಕೂಡ ಬಹಳ ಪುರಾತನವಾದುದಾಗಿವೆ. ಹಿಂದಿನ ಕಾಲದಲ್ಲಿ ಹಡಗುಗಳನ್ನು ಮರದಿಂದ ಮಾಡುತ್ತಿದ್ದರು. ಅವುಗಳ ಚಲನೆ ಗಾಳಿಯ ಬೀಸುವಿಕೆಯನ್ನು ಅವಲಂಬಿಸಿದ್ದುವು. ಆದರೆ ಈಗ ಕಬ್ಬಿಣ ಮತ್ತು ಉಕ್ಕುಗಳಿಂದ ಹಡಗುಗಳನ್ನು ತಯಾರಿಸುವರು. ಮತ್ತು ಉಗಿ ಅಥವಾ ಎಣ್ಣೆ ಯಂತ್ರಗಳಿಂದ ಚಲಿಸುವುವು. ಜಲಮಾರ್ಗ ಸಾಗಣೆ ಅತಿ ಕಡಿಮೆ ಖರ್ಚಿನಲ್ಲಿ ಆಗುವುದು. ಕಾಲುವೆಗಳನ್ನು ಬಿಟ್ಟರೆ ಇತರ ಜಲ ಮಾರ್ಗಗಳು ಪ್ರಕೃತಿಯ ಕೊಡುಗೆಯಾಗಿರುವುವು. ಆದರೆ ಹಡಗುಗಳು, ಬಂದರು ಮೊದಲಾದವುಗಳನ್ನು ನಿರ್ಮಿಸಲು ಹೇರಳವಾಗಿ ಹಣ ವೆಚ್ಚ ವಾಗುವುದು.

ಈಗ ಸಮುದ್ರಯಾನ ಮಾಡಲು ಬಹಳ ದೊಡ್ಡ ದೊಡ್ಡ ಹಡಗುಗಳು ಇರುವುವು. ಇಂದಿನ ಕಾಲದ ಹಡಗುಗಳನ್ನು ಮುಖ್ಯವಾಗಿ ಎರಡು ಗುಂಪು ಗಳನ್ನಾಗಿ ವಿಂಗಡಿಸಬಹುದು. ಮೊದಲನೆಯದು ಲೈನರ್ಸ್ ಎಂಬ ಹಡಗುಗಳು ಮತ್ತು ಎರಡನೆಯದು ಟ್ರಾಂಪ್ಸ್ ಎಂಬ ಹಡಗುಗಳು.

ಲೈನರ್ಸ್ ಹಡಗುಗಗಳು ಬಹಳ ದೊಡ್ಡವಿದ್ದು ಹೆಚ್ಚು ಸೌಕರ್ಯ ಗಳಿಂದ ಕೂಡಿರುವುವು. ಇವುಗಳು ಜನರು ಮತ್ತು ಸರಕುಗಳನ್ನು ಒಯ್ಯುವಂತವುಗಳು. ಇವುಗಳು ಮೊದಲೇ ನಿಗದಿಪಡಿಸಿದ ವೇಳಾ ಪಟ್ಟಿಗೆ ಅನುಸಾರವಾಗಿ ಒಂದು ಸ್ಥಳದಿಂದ ಹೊರಡುವುವು. ಇವುಗಳಲ್ಲಿನ ಪ್ರಯಾಣದ ದರಗಳನ್ನು ಕೂಡ ಮೊದಲೇ ನಿಗದಿ ಮಾಡಲಾಗಿರುವುದು. ಸಾಗಣೆಗೆ ಜನರು ಅಥವಾ ಸರಕುಗಳು ಸಿಗಲಿ ಯಾ ಸಿಗದಿರಲಿ, ಇವು ಮಾತ್ರ ಪ್ರಯಾಣವನ್ನು ನಿಯಮಿತ ವೇಳೆಯಂತೆ ಮಾಡುತ್ತವೆ.

ಟ್ರಾಂಪ್ಸ್ ಹಡಗುಗಳಿಗೆ ಈ ರೀತಿಯ ನಿಯಮವಿರುವುದಿಲ್ಲ. ಇವು ಕಾಲನಿಯಮವಿಲ್ಲದೆ ಎಲ್ಲೆಲ್ಲಿಗಾದರೂ ಹೋಗುವುವು. ಇವುಗಳನ್ನು ರಸ್ತೆ ಸಾರಿಗೆಯಲ್ಲಿನ ಲಾರಿಗಳಿಗೆ ಹೋಲಿಸಬಹುದು. ಇವುಗಳು ತಮ್ಮ ಚಲನವಲನಗಳಲ್ಲಿ ಒಂದೆಕ್ಕೊಂದು ಸ್ಪರ್ಧಿಸುವುವು.

ಲೈನರ್ಸ್ ಹಡಗುಗಳ ಮಾಲೀಕರು ಯಾವಾಗಲೂ ಒಂದು ಸಂಘ ವನ್ನು ಮಾಡಿಕೊಳ್ಳುವರು. ಇದರಿಂದ ತಮ್ಮ ತಮ್ಮಲ್ಲಿ ಉಂಟಾಗಬಹುದಾದ ಸ್ಪರ್ಧೆ ಮತ್ತು ಟ್ರಾಂಪ್ಸ್‌ಗಳಿಂದ ಉದ್ಭವಿಸುವ ಸ್ಪರ್ಧೆಯನ್ನು ಹೋಗ

ಲಾಡಿಸಿಕೊಳ್ಳುವರು. ಈ ಸಂಘವು ಬೇರೆ ಬೇರೆ ನೌಕಾಮಾರ್ಗಗಳನ್ನು ಬೇರೆ ಬೇರೆ ಲೈನರುಗಳಿಗೆ ಕೊಟ್ಟಿರುವುದು. ನಂತರ ಒಂದು ಒಪ್ಪಂದದ ಮೂಲಕ ಟ್ರಾಂಪ್ಸುಗಳಿಂದ ಉಂಟಾಗುವ ಸ್ಪರ್ಧೆಯನ್ನು ಹೋಗಲಾಡಿಸಲು ಪ್ರಯತ್ನಿಸುವುದು. ಲೈನರುಗಳಲ್ಲಿ ಸರಕುಗಳನ್ನು ಕಳುಹಿಸಲು ಗಿರಾಕಿಗಳು ಹಣ ಕೊಡಬೇಕಾಗುವುದು. ಈ ಹಣದ ಸ್ವಲ್ಪ ಭಾಗವನ್ನು ಮೊದಲು ಕಡಿಮೆಮಾಡಿಕೊಡಬಹುದು. ಈ ಕಡಿಮೆಮಾಡಿದ ಹಣಕ್ಕೆ ರಿಬೇಟ್ ಅಥವಾ ಸೋಡ್ತಿ ಎಂದು ಹೆಸರು. ಈ ಹಣವನ್ನು ಗಿರಾಕಿಗಳಿಗೆ ಆರು ತಿಂಗಳ ನಂತರ ಕೊಡಲಾಗುವುದು. ಈ ಆರು ತಿಂಗಳ ಕಾಲವೂ ಗಿರಾಕಿಗಳು ತಮ್ಮ ಸರಕುಗಳನ್ನು ಸಂಘದ ಲೈನರುಗಳಲ್ಲೇ ಕಳುಹಿಸಬೇಕಾಗುವುದು. ಇದಕ್ಕೆ ಡೆಫರ್ಡ್ ರಿಬೇಟ್ ಪದ್ಧತಿಯೆಂದು ಹೆಸರು.

ವಾಯು ಮಾರ್ಗಗಳು ೨೦ ನೆಯ ಶತಮಾನದ ಕೊಡುಗೆಯಾಗಿರುವುವು. ಇವುಗಳಿಗೆ ಯಾವ ಬಗೆಯ ಖರ್ಚು ಬರುವುದಿಲ್ಲ. ಆದರೆ ವಿಮಾನಗಳು, ನಿಲ್ದಾಣಗಳು ಮತ್ತು ಇತರ ಸಲಕರಣೆಗಳನ್ನು ಮಾಡಲು ಹೆಚ್ಚು ಬಂಡವಾಳ ಬೇಕಾಗುವುದು. ವಾಯುಸಂಚಾರ ಅತಿ ವೇಗವಾದ ಸಂಚಾರ ಸೌಕರ್ಯವಾಗಿರುವುದು.

## ನಮ್ಮ ದೇಶದ ಸಾರಿಗೆ ವ್ಯವಸ್ಥೆ

ನಮ್ಮ ಭಾರತ ವಿಸ್ತೀರ್ಣದಲ್ಲಿ ಬಹಳ ದೊಡ್ಡ ದೇಶ. ಅಲ್ಲದೆ ಇದು ಹಳ್ಳಿಗಳ ನಾಡು. ಆದುದರಿಂದ ಹಳ್ಳಿಗಳಿಗೂ ಮತ್ತು ಪಟ್ಟಣ ನಗರಗಳಿಗೂ ಸಾರಿಗೆ ಸಂಪರ್ಕದ ಅವಶ್ಯಕತೆ ಹೆಚ್ಚಾಗಿರುವುದು. ಹಳ್ಳಿಗಳಲ್ಲಿ ಬೆಳೆದ ವಸ್ತುಗಳನ್ನು ಇತರ ಊರುಗಳಿಗೆ ಸಾಗಿಸಲು ಅನುಕೂಲವಾದ ರಸ್ತೆಗಳು ಬೇಕು. ನಮ್ಮ ದೇಶದಲ್ಲಿ ರಸ್ತೆನಿರ್ಮಾಣ ಕಾರ್ಯವನ್ನು ವ್ಯವಸ್ಥಿತವಾಗಿ ಪ್ರಾರಂಭಿಸಿದವರೆಂದರೆ ಲಾರ್ಡ್ ಡಾಲ್‌ಹೌಸಿಯವರು. ನಂತರ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ತಮ್ಮ ಲೋಕೋಪಯೋಗಿ ಇಲಾಖೆಗಳ ಮೂಲಕ ರಸ್ತೆಗಳನ್ನು ನಿರ್ಮಿಸಲು ಪ್ರಾರಂಭಿಸಿದವು. ಈ ಶತಮಾನದ ಮೊದಲನೇ ಭಾಗದಲ್ಲಿ ರಸ್ತೆಗಳ ಅವಶ್ಯಕತೆ ಹೆಚ್ಚಾದಾಗ ಜಿಲ್ಲಾ ಮಂಡಳಿಗಳು ಮತ್ತು ಸ್ಥಳೀಯ ಸಂಸ್ಥೆಗಳು ಈ ಕೆಲಸದಲ್ಲಿ ನಿರತರಾದವು. ೧೯೩೦ ರಲ್ಲಿ ಕೇಂದ್ರ

ರಸ್ತೆಯ ನಿಧಿಯನ್ನು ಸ್ಥಾಪಿಸಿ ರಸ್ತೆಯ ತೆರಿಗೆಗಳನ್ನು ಈ ನಿಧಿಗೆ ಕೊಡು ವಂತಾಯಿತು. ಈಗ ನಮ್ಮ ಭಾರತ ದೇಶದಲ್ಲಿ ಸುಮಾರು ೧೦,೦೦೦೦ ಕಿ.ಮಿೀ. ಉದ್ದದ ರಸ್ತೆಗಳಿವೆ.

೧. ನಮ್ಮ ದೇಶದಲ್ಲಿ ರೈಲ್ವೆ ಸಂಚಾರ ವ್ಯವಸ್ಥೆ :

ನಮ್ಮ ದೇಶದಲ್ಲಿ ಪ್ರಥಮತವಾಗಿ ರೈಲ್ವೆ ಸಾರಿಗೆ ಆರಂಭಿಸಿದ್ದು ೧೮೫೩ ರಲ್ಲಿ. ನಮ್ಮಲ್ಲಿನ ರೈಲ್ವೆ ವ್ಯವಸ್ಥೆ ಏಶ್ಯಾಖಂಡದಲ್ಲಿ ಮೊದಲನೆಯ ಮತ್ತು ಜಗತ್ತಿನಲ್ಲಿ ನಾಲ್ಕನೆಯ ಸ್ಥಾನಗಳನ್ನು ಪಡೆದಿರುವುದು. ನಮ್ಮಲ್ಲಿ ಈಗ ಸುಮಾರು ೬೮,೦೦೦ ಕಿ.ಮಿೀ. ಗಳಷ್ಟು ರೈಲ್ವೆಮಾರ್ಗ ಇರುವುದು. ದೇಶದ ಸರಕು ಸಾಗಾಣಿಕೆಯ ಶೇಕಡ ೮೦ ರಷ್ಟು ಮತ್ತು ಜನಸಂಚಾರದ ಶೇಕಡ ೭೦ ರಷ್ಟನ್ನು ರೈಲ್ವೆಗಳು ಮಾಡುತ್ತಿವೆ. ೧೯೫೦ಕ್ಕೆ ಮೊದಲು ನಮ್ಮ ರೈಲ್ವೆಯನ್ನು ಖಾಸಗೀ ಸಂಸ್ಥೆಗಳು ನಡೆಸುತ್ತಿದ್ದವು. ಆದರೆ ಈಗ ರೈಲ್ವೆಯು ಸಂಪೂರ್ಣ ರಾಷ್ಟ್ರೀಕರಣವಾಗಿರುವುದು. ಆಡಳಿತದ ಅನುಕೂಲತೆಗಳಿಗೊಸ್ಕರ ನಮ್ಮ ರೈಲ್ವೆಯನ್ನು ಇಂದು ೯ ವಿಭಾಗಗಳನ್ನಾಗಿ ಮಾಡಿರುವರು. ಅವುಗಳು ಯಾವುವೆಂದರೆ, ದಕ್ಷಿಣ ರೈಲ್ವೆ, ಪಶ್ಚಿಮ ರೈಲ್ವೆ, ಸೆಂಟ್ರಲ್ ರೈಲ್ವೆ, ಉತ್ತರ ರೈಲ್ವೆ, ಈಶಾನ್ಯ ರೈಲ್ವೆ, ಈಶಾನ್ಯ ಗಡಿ ರೈಲ್ವೆ, ಪೂರ್ವ ರೈಲ್ವೆ, ಆಗ್ನೇಯ ರೈಲ್ವೆ, ಮತ್ತು ದಕ್ಷಿಣ ಮಧ್ಯ ರೈಲ್ವೆ.

೨. ಜಲಮಾರ್ಗಗಳು :

ನಮ್ಮ ದೇಶದಲ್ಲಿ ಜಲಪ್ರಯಾಣ ಅತೀ ಪುರಾತನವಾದುದು. ಇತಿಹಾಸದ ಪ್ರಾರಂಭದಲ್ಲಿಯೇ ನಮ್ಮ ದೇಶ ಜಲಮಾರ್ಗಗಳ ಮೂಲಕ ಇತರ ರಾಷ್ಟ್ರಗಳೊಂದಿಗೆ ವಾಣಿಜ್ಯ ಸಂಪರ್ಕಗಳನ್ನು ಇಟ್ಟುಕೊಂಡಿತ್ತು. ಆದುದರಿಂದ ಭಾರತದೇಶ ಜಲಮಾರ್ಗ ಸಾರಿಗೆಗೆ ಹಿಂದಿನ ಕಾಲದಿಂದಲೂ ಪ್ರಸಿದ್ಧಿಯಾಗಿರುವುದು. ಕೈಗಾರಿಕಾ ಕ್ರಾಂತಿಯಾದನಂತರ ಪಾಶ್ಚಿಮಾತ್ಯ ರಾಷ್ಟ್ರಗಳು ಹಡಗುಗಳ ನಿರ್ಮಾಣಕಾರ್ಯದಲ್ಲಿ ಬಹಳ ಪ್ರಗತಿಯನ್ನು ಸಾಧಿಸಿದವು. ೧೯೪೭ ರಲ್ಲಿ ಭಾರತ ಸರ್ಕಾರ ಒಂದು " ನೌಕಾನೀತಿ ಸಮಿತಿ "ಯನ್ನು ನೇಮಕಮಾಡಿತು. ಈ ಸಮಿತಿಯು ಇತ್ತ ಸಲಹೆಗಳಲ್ಲಿ ಅತಿ ಮುಖ್ಯವಾದುದು ಎಂದರೆ ನಮ್ಮ ಸರಕಾರ ಎಲ್ಲಾ ಪಂಚವಾರ್ಷಿಕ ಯೋಜನೆಗಳಲ್ಲಿ

ನೌಕಾಭಿವೃದ್ಧಿಗೆ ಸಾಕಷ್ಟು ಹಣವನ್ನು ಮೀಸಲಾಗಿಡಬೇಕು. ಇದರಂತೆ ದೇಶದಲ್ಲಿ ನೌಕಾಭಿವೃದ್ಧಿ ಬಹಳ ಮಟ್ಟಿಗೆ ಆಯಿತು.

೩. ನಮ್ಮ ದೇಶದ ವಿಮಾನ ಸಾರಿಗೆ ವ್ಯವಸ್ಥೆ :

ನಮ್ಮ ದೇಶದ ಹವಾಮಾನ ವಾಯು ಸಂಚಾರಾಭಿವೃದ್ಧಿಗೆ ಬಹಳ ಅನುಕೂಲವಾಗಿರುವುದು. ನಮ್ಮ ದೇಶ ಪೂರ್ವ ಮತ್ತು ಪಶ್ಚಿಮ ರಾಷ್ಟ್ರಗಳ ಮಧ್ಯೆ ಯಿರುವುದರಿಂದ ವಿಮಾನ ಸಂಚಾರಕ್ಕೆ ಯೋಗ್ಯವಾಗಿರುವುದು.

ಭಾರತದಲ್ಲಿ ವಿಮಾನ ಸಾರಿಗೆ ಪ್ರಾರಂಭವಾಗಿದ್ದು ೧೯೧೧ರಲ್ಲಿ. ೧೯೨೭ ರಲ್ಲಿ ಸರ್ಕಾರ "ಸಿವಿಲ್ ಏವಿಯೇಶನ್" ಇಲಾಖೆಯನ್ನು ಸ್ಥಾಪಿಸಿತು. ಹಲವಾರು ಖಾಸಗೀ ಸಂಸ್ಥೆಗಳು ವಿಮಾನ ಸಂಚಾರ ವ್ಯವಸ್ಥೆಯನ್ನು ಕೈಗೊಳ್ಳಲು ಮುಂದೆ ಬಂದುವು. ಎರಡನೆಯ ಜಾಗತಿಕ ಯುದ್ಧದ ಕಾಲದಲ್ಲಿ ವಾಯು ಸಂಚಾರದ ಪ್ರಾಮುಖ್ಯತೆಯ ಅರಿವು ಹೆಚ್ಚಾದಾಗ ಬೆಂಗಳೂರಿನಲ್ಲಿ ಒಂದು ವಿಮಾನ ಕಾರ್ಖಾನೆಯನ್ನು ಸ್ಥಾಪನೆ ಮಾಡ ಲಾಯಿತು. ೧೯೫೦ ರ ಹೊತ್ತಿಗೆ ಭಾರತದಲ್ಲಿ ಒಂಭತ್ತು ಸಂಸ್ಥೆಗಳು ವಿಮಾನ ಸಾರಿಗೆ ವ್ಯವಸ್ಥೆಯನ್ನು ಮಾಡುತ್ತಿದ್ದವು. ೧೯೫೩ ರಲ್ಲಿ ವಿಮಾನ ಸಾರಿಗೆ ಯನ್ನು ರಾಷ್ಟ್ರೀಕರಣ ಮಾಡಿ "ಇಂಡಿಯನ್ ಏರ್ ಲೈನ್ಸ್ ಕಾರ್ಪೊ ರೇಶನ್" ಮತ್ತು "ಏರ್ ಇಂಡಿಯಾ ಇಂಟರ್ ನೇಶನಲ್" ಎಂಬ ಒಳ ದೇಶದ ಮತ್ತು ಅಂತರರಾಷ್ಟ್ರೀಯ ವಾಯುಮಾರ್ಗ ಸಂಚಾರಗಳನ್ನು ಪ್ರಾರಂಭಿಸಲಾಯಿತು. ಎಲ್ಲಾ ಪಂಚವಾರ್ಷಿಕ ಯೋಜನೆಗಳಲ್ಲಿ ವಾಯು ಸಂಚಾರಾಭಿವೃದ್ಧಿಗೆ ಕೋಟಿಗಟ್ಟಲೆ ಹಣವನ್ನು ಖರ್ಚುಮಾಡಲಾಗಿರುವುದು.

೪. ಏಕವ್ಯಕ್ತಿ ಯಜಮಾನೀಯ ಸಂಸ್ಥೆ:

ಒಂದು ದೇಶದ ಆರ್ಥಿಕ ವ್ಯವಸ್ಥೆಯಲ್ಲಿರುವ ಅನೇಕ ಬಗೆಯ ಸಂಸ್ಥೆ ಗಳಲ್ಲಿ ಮುಖ್ಯವಾದವುಗಳೆಂದರೆ ಏಕವ್ಯಕ್ತಿ ಯಜಮಾನೀಯ ಸಂಸ್ಥೆಗಳು ಪಾಲುದಾರ ಸಂಸ್ಥೆಗಳು ಮತ್ತು ಕೂಡು ಬಂಡವಾಳ ಸಂಸ್ಥೆಗಳು ಕೈಗಾರಿಕಾ ಕ್ರಾಂತಿಯ ಮೊದಲು ಉತ್ಪಾದನೆ ಸಣ್ಣ ಪ್ರಮಾಣದಲ್ಲಿ ಆಗುತ್ತಿದ್ದುದ ರಿಂದ, ಆಗ ಕೇವಲ ಏಕವ್ಯಕ್ತಿಯ ಯಜಮಾನೀಯ ಸಂಸ್ಥೆಗಳೇ ಹೆಚ್ಚಾಗಿ ಇದ್ದುವು.

ಇದರಲ್ಲಿ ಹಲವಾರು ಅನುಕೂಲತೆಗಳಿರುವುವು. ವ್ಯಕ್ತಿಯು ಗ್ರಾಹಕರ ಅಭಿರುಚಿಯನ್ನು ತಿಳಿದುಕೊಂಡು ಅದಕ್ಕೆ ತಕ್ಕುದಾದ ವಸ್ತುಗಳನ್ನು ತಯಾರಿಸಬಹುದು. ಎಲ್ಲಾ ಲಾಭ ತನಗೇ ಬರುವುದರಿಂದ ಉದ್ಯಮದಲ್ಲಿ ಉತ್ಸಾಹವುಂಟಾಗುವುದು. ಕೆಲಸದ ಮೇಲ್ವಿಚಾರಣೆಯನ್ನು ಸ್ವತಃ ನೋಡಿ ಕೊಳ್ಳಬಹುದು.

ಆದರೆ ಇದರಲ್ಲಿ ಉತ್ಪಾದನೆಯನ್ನು ಹೆಚ್ಚುಮಾಡಲು ಸಾಧ್ಯವಾಗು ವುದಿಲ್ಲ. ಒಬ್ಬ ವ್ಯಕ್ತಿಯ ಸ್ವಂತ ಬಂಡವಾಳಕ್ಕೆ ಮಿತಿಯಿರುವುದರಿಂದ ಉದ್ಯಮವು ಕೇವಲ ಸಣ್ಣ ಪ್ರಮಾಣದಲ್ಲಿರುವುದು.

೫. ಪಾಲುದಾರ ಸಂಸ್ಥೆ :

ಇಬ್ಬರು ಅಥವಾ ಹೆಚ್ಚು ಜನರು ಸೇರಿ ಬಂಡವಾಳ ಹಾಕಿ ಒಂದು ಉದ್ಯಮವನ್ನು ಕೈಗೊಂಡರೆ ಆ ವ್ಯವಸ್ಥೆಗೆ ಪಾಲುದಾರ ಸಂಸ್ಥೆ ಎಂದು ಕರೆಯಲಾಗುವುದು. ಉದ್ಯಮದಲ್ಲಿ ಲಾಭ ಯಾ ನಷ್ಟ ಏನು ಸಂಭವಿಸಿ ದರೂ ಪಾಲುದಾರರು ಹಂಚಿಕೊಳ್ಳುವರು. ಏಕವ್ಯಕ್ತಿಯ ಸಂಸ್ಥೆಗಿಂತ ಹೆಚ್ಚು ಬಂಡವಾಳವನ್ನು ಇದರಲ್ಲಿ ಶೇಖರಿಸಬಹುದು. ಆದರೆ ನಷ್ಟವಾಗಿ ಸಂಸ್ಥೆ ದಿವಾಳಿಯಾದಲ್ಲಿ ನಷ್ಟವನ್ನು ಭರ್ತಿಮಾಡಲು ಪಾಲುದಾರರ ಸ್ವಂತ ಆಸ್ತಿಯೆಲ್ಲವೂ ಕಳೆದುಹೋಗುವುದು.

೬. ಕೂಡುಬಂಡವಾಳ ಕಂಪೆನಿ :

ಇದು ಸರಕಾರದ ನಿಯಮಗಳ ಪ್ರಕಾರ ರಿಜಿಸ್ಟರ್ಡ್ ಆಗಿರುವ ಉದ್ಯಮ ಸಂಸ್ಥೆ. ಈ ಕಂಪೆನಿಯ ಷೇರುದಾರರು ಸಾರ್ವಜನಿಕರಿಂದ ಷೇರು ಗಳ ಮೂಲಕ ಬಂಡವಾಳ ಎತ್ತುವರು. ಕಂಪೆನಿಯ ಆಡಳಿತ ವ್ಯವಸ್ಥೆಯು ಚುನಾಯಿತರಾದ ಡೈರೆಕ್ಟರುಗಳ ಮೂಲಕ ಮತ್ತು ನೇಮಿಸಲ್ಪಡುವ ಇತರ ಉದ್ಯೋಗಿಗಳ ಮೂಲಕ ನಡೆಯುವುದು. ಬಂದ ಲಾಭವನ್ನು ಷೇರುದಾರ ರಿಗೆ ಅವರ ಷೇರುಗಳ ಪ್ರಮಾಣಕ್ಕೆ ಅನುಗುಣವಾಗಿ ಹಂಚಲಾಗುವುದು. ಇದರಲ್ಲಿ ಷೇರುದಾರರಿಗೆ ಎರಡು ಬಗೆಯ ಜವಾಬ್ದಾರಿಕೆಯಿರುವುದು. ಯಾವುವೆಂದರೆ ಮಿತ ಜವಾಬ್ದಾರಿಕೆ ಮತ್ತು ಅಮಿತ ಜವಾಬ್ದಾರಿಕೆ.

ಮಿತ ಜವಾಬ್ದಾರಿಕೆಯಿರುವ ಸಂಸ್ಥೆಯಲ್ಲಿ, ಷೇರುದಾರರು ಕೊಂಡು ಕೊಳ್ಳುವ ಷೇರುಗಳ ಮೊತ್ತ ಮಾತ್ರ ಅವರ ಹೊಣೆಗೆ ಮಿತಿಯಾಗಿರುವುದು. ಇದರಿಂದ ಈ ರೀತಿಯ ಸಂಸ್ಥೆಗಳೇ ಹೆಚ್ಚಾಗಿ ಬೆಳೆದವು. ಇದರಲ್ಲಿ ಷೇರುದಾರರು ತಮ್ಮ ಷೇರುಗಳನ್ನು ಮಾರಾಟಮಾಡಬಹುದು.

ಅಮಿತ ಜವಾಬ್ದಾರಿಕೆ ಯಿರುವ ಕಂಪೆನಿಯಲ್ಲಿ ಎಲ್ಲಾದರೂ ನಷ್ಟವುಂಟಾದರೆ, ಕಂಪೆನಿಯ ಸಾಲಗಾರರಿಗೆ ಕೊಡಬೇಕಾದ ಹಣವನ್ನು ಭರ್ತಿ ಮಾಡಲು ಷೇರುದಾರರು ಹಾಕಿದ ಬಂಡವಾಳದೊಡನೆ ಅವರ ಇತರ ಆಸ್ತಿಯನ್ನೂ ಪಡೆದುಕೊಳ್ಳಲಾಗುವುದು.

ಕೂಡು ಬಂಡವಾಳ ಕಂಪೆನಿಗಳಲ್ಲಿ ಎರಡು ವಿಧ. ಖಾಸಗಿ ಲಿಮಿಟೆಡ್ ಕಂಪೆನಿಗಳು, ಮತ್ತು ಸಾರ್ವಜನಿಕ ಲಿಮಿಟೆಡ್ ಕಂಪೆನಿಗಳು. ಖಾಸಗಿ ಲಿಮಿಟೆಡ್ ಕಂಪೆನಿಗಳಲ್ಲಿ ಸಾಮಾನ್ಯವಾಗಿ ಷೇರುದಾರರ ಸಂಖ್ಯೆ ೫೦ ಕ್ಕೆ ಮೀರಿರುವುದಿಲ್ಲ. ಈ ಕಂಪೆನಿಗಳು ತಮ್ಮ ಹಣಕಾಸಿನ ಲೆಕ್ಕಗಳನ್ನು ಸಾರ್ವಜನಿಕರ ಗಮನಕ್ಕೆ ಪ್ರಕಟಿಸಬೇಕೆಂಬ ನಿರ್ಬಂಧವಿಲ್ಲ. ಷೇರುಗಳನ್ನು ಮಾರಲು ಯಾ ಕೊಳ್ಳಲು ಬರುವುದಿಲ್ಲ.

ಸಾರ್ವಜನಿಕ ಲಿಮಿಟೆಡ್ ಕಂಪೆನಿಗಳಲ್ಲಿ ಷೇರುದಾರರ ಸಂಖ್ಯೆ ೫೦ ಕ್ಕೆ ಹೆಚ್ಚಾಗಿರಬಹುದು. ಷೇರುಗಳನ್ನು ಮಾರಬಹುದು ಮತ್ತು ಕೊಳ್ಳಬಹುದು. ಕಂಪೆನಿಯ ಕಾನೂನು ಪ್ರಕಾರ ಲೆಕ್ಕ ಪತ್ರಗಳನ್ನು ಸಾರ್ವಜನಿಕ ಗಮನಕ್ಕೆ ತರಬೇಕಾಗುವುದು.



ಅಭ್ಯಾಸ ೬

# ಹಣ ಮತ್ತು ಬ್ಯಾಂಕುಗಳು

## ೧. ವಸ್ತು ವಿನಿಮಯ ಪದ್ಧತಿ

ಹಿಂದಿನ ಕಾಲದಲ್ಲಿ ಮನುಷ್ಯನಿಗೆ ಹಣದ ಉಪಯೋಗ ಗೊತ್ತಿರಲಿಲ್ಲ. ಅಂತಹ ಕಾಲದಲ್ಲಿ ಜನರು ತಾವು ಉತ್ಪಾದಿಸಿದ ವಸ್ತುಗಳನ್ನು ಪರಸ್ಪರ ವಿನಿಮಯ ಮಾಡಿಕೊಂಡು ತಮ್ಮ ಅಪೇಕ್ಷೆಗಳನ್ನು ಪೂರೈಸಿಕೊಳ್ಳುತ್ತಿದ್ದರು. ತಮ್ಮ ವಸ್ತುಗಳನ್ನು ಕೊಟ್ಟು ಅಥವಾ ಏನಾದರೊಂದು ಸೇವೆ ಸಲ್ಲಿಸಿ ಇತರ ರಿಂದ ವಸ್ತುಗಳನ್ನು ಕೊಂಡುಕೊಳ್ಳುತ್ತಿದ್ದರು. ಈ ರೀತಿಯ ಆರ್ಥಿಕ ಕಾರ್ಯಕ್ಕೆ ವಸ್ತು ವಿನಿಮಯ ಪದ್ಧತಿ ಎಂದು ಹೆಸರು. ಇದನ್ನು 'ಸಾಟಿ' ಪದ್ಧತಿಯೆಂದೂ ಕರೆಯುವರು. ಇಂದಿಗೂ ಕೂಡ ಅನೇಕ ಹಿಂದುಳಿದ ಪಂಗಡಗಳಲ್ಲಿ ಈ ಪದ್ಧತಿ ಬಳಕೆಯಲ್ಲಿರುವುದು. ಈ ವಸ್ತು ವಿನಿಮಯ ಪದ್ಧತಿಯ ಅನಾನುಕೂಲತೆಗಳನ್ನು ಹೋಗಲಾಡಿಸಲು ಈಗ ನಾವು ಹಣವನ್ನು ಉಪಯೋಗಿಸುತ್ತೇವೆ.

ವಸ್ತು ವಿನಿಮಯ ಅಥವಾ ಸಾಟಿ ಪದ್ಧತಿಯಲ್ಲಿ ಹಲವಾರು ಕುಂದು ಕೊರತೆಗಳಿರುವುವು. ಮುಖ್ಯವಾಗಿ ಮಾನವರ ಇಷ್ಟಾರ್ಥಗಳು ಪರಸ್ಪರ ಹೊಂದಿಕೊಳ್ಳದಿದ್ದಲ್ಲಿ ಈ ಪದ್ಧತಿ ಹೆಚ್ಚು ಪ್ರಯೋಜನಕಾರಿಯಾಗಲಾರದು. ಉದಾಹರಣೆಗೆ :–A ಎಂಬುವನು ಗೋಧಿ ಉತ್ಪಾದಕನು. B ಎಂಬುವನು ಕೋಳಿ ಸಾಕುವವನು. Bಗೆ ಗೋಧಿ ಬೇಕಾಗಿದ್ದರೆ Aಗೆ ಕೋಳಿಯ ಅವಶ್ಯಕತೆಯಿದ್ದರೆ ಮಾತ್ರ ಅವರಿಬ್ಬರಲ್ಲಿ ತಮ್ಮ ವಸ್ತುಗಳ ವಿನಿಮಯ ಸಾಧ್ಯ. ಇಲ್ಲವಾದರೆ ಕೋಳಿಯನ್ನು ಅಪೇಕ್ಷಿಸುವಂತಹ ಗೋಧಿ ಬೆಳೆಯುವವನನ್ನು A ಹುಡುಕಿಕೊಂಡು ಹೋಗಬೇಕು. ಈ ರೀತಿ ಪರಸ್ಪರ ಇಷ್ಟಗಳ ಹೊಂದಾಣಿಕೆಯಿಲ್ಲದಿದ್ದಲ್ಲಿ ಸಾಟಿ ಪದ್ಧತಿ ಸಾಧ್ಯವಿಲ್ಲ.

ಎರಡನೆಯದಾಗಿ ಅನೇಕ ವಸ್ತುಗಳನ್ನು ಸಣ್ಣ ಪ್ರಮಾಣದ ಅಂಶ ಗಳನ್ನಾಗಿ ವಿಭಜಿಸಲು ಸಾಧ್ಯವಾಗುವುದಿಲ್ಲ. ಮುಖ್ಯವಾಗಿ ಪ್ರಾಣಿಗಳನ್ನು ವಿನಿಮಯ ಮಾಡುವಾಗ ಈ ತೊಂದರೆ ಕಂಡುಬರುವುದು. ಉದಾ :–Aಯ

ಹತ್ತಿರ ಒಂದು ಕುರಿಯಿರುವುದು. Bಯ ಹತ್ತಿರ ೫ ಕೋಳಿಗಳಿರುವುವು. ಈಗ Aಗೆ ಒಂದು ಕೋಳಿ ಬೇಕಾದರೆ ಯಾವ ರೀತಿ B ಯಿಂದ ಪಡೆಯುವುದು ಎಂದು ತಿಳಿಯುವುದಿಲ್ಲ. B ಯು ಒಂದು ಕೋಳಿಗೆ A ಯು ಕುರಿಯ ಯಾವುದಾದರೂ ಒಂದು ಭಾಗವನ್ನು ಕತ್ತರಿಸಿ ಕೊಡಲು ಬರುವುದಿಲ್ಲ.

ಈ ಪದ್ಧತಿಯ ಮತ್ತೊಂದು ನ್ಯೂನತೆಯೆಂದರೆ ವಿವಿಧ ವಸ್ತುಗಳ ಮೌಲ್ಯವನ್ನು ಕಂಡುಹಿಡಿಯಲು ಸಾಧ್ಯವಾಗುವುದಿಲ್ಲ. ಒಂದು ಚೀಲ ಜೋಳ ಒಂದು ಚೀಲ ಅಕ್ಕಿ, ಒಂದು ಹಸು, ಒಂದು ಕೋಳಿ, ಹೀಗೆ ಇವುಗಳ ಮೌಲ್ಯವನ್ನು ಅಳೆಯಲು ಸಾಧ್ಯವಿಲ್ಲ. ಕೇವಲ ಅಂದಾಜಿನಿಂದ ಮಾತ್ರ ವಸ್ತುಗಳ ವಿನಿಮಯ ಸಾಧ್ಯ.

ಕೊನೆಯದಾಗಿ ಕೆಲವು ವಸ್ತುಗಳನ್ನು ಹೆಚ್ಚು ಸಮಯ ಶೇಖರಿಸಿ ಇಡಲು ಬರುವುದಿಲ್ಲ. ಇಂತಹ ವಸ್ತುಗಳ ವಿನಿಮಯ ಒಂದು ದೊಡ್ಡ ಸಮಸ್ಯೆಯಾಗಿ ಪರಿಣಮಿಸುವುದು. ಈ ಎಲ್ಲಾ ಕುಂದುಕೊರತೆಗಳು ಹಣದ ಬಳಕೆ ಆರಂಭವಾದಾಗ ಮಾಯವಾದುವು.

## ‘ ಹಣ ’ ಎಂದರೇನು ?

ಜಗತ್ತಿನಲ್ಲಿ ಎಲ್ಲರಿಂದಲೂ ಮಾನ್ಯತೆ ಪಡೆದಿರುವ ಯಾವ ಒಂದು ವಸ್ತುವನ್ನು ಸಾಮಾನ್ಯವಾಗಿ ವಿನಿಮಯ ಮತ್ತು ಇತರ ಸೇವೆಗಳಿಗೆ ಉಪ ಯೋಗಿಸುತ್ತೇವೆಯೋ ಅಂತಹ ವಸ್ತುವನ್ನು ‘ ಹಣ ’ ಎಂದು ಕರೆಯುತ್ತೇವೆ. ಈ ವಸ್ತುವಿನಿಂದ ಪದಾರ್ಥಗಳನ್ನು ಕೊಳ್ಳಲು ಮತ್ತು ಇದಕ್ಕೆ ಮಾರಲು ಸಾಧ್ಯವಾಗುವುದು. ವಿನಿಮಯ ಕಾರ್ಯಗಳಲ್ಲಿ ಎಲ್ಲರೂ ಈ ವಸ್ತುವನ್ನೇ ಉಪಯೋಗಿಸಬೇಕು. ಆದುದರಿಂದ ಸರ್ವರಿಂದಲೂ ಸ್ವೀಕೃತವಾದ ಮತ್ತು ಸರ್ವಸಮ್ಮತವಾದ ವಿನಿಮಯ ಮಾಧ್ಯಮಕ್ಕೆ ಹಣ ಎಂದು ಕರೆಯುತ್ತೇವೆ.

## ಹಣದ ಕಾರ್ಯಗಳು

ಒಂದು ವಸ್ತುವನ್ನು ಹಣವೆಂದು ಕರೆಯಬೇಕಾದರೆ ಅದು ಈ ಕೆಳಗೆ ಸೂಚಿಸಿದ ಕೆಲಸಕಾರ್ಯಗಳನ್ನು ಮಾಡಬೇಕಾಗುವುದು.

೧. **ವಿನಿಮಯ ಮಾಧ್ಯಮ :** ಎಲ್ಲಾ ಜನರು ವಿನಿಮಯ ಕಾರ್ಯಗಳಿಗೆ ಇದನ್ನೇ ಉಪಯೋಗಿಸಬೇಕು. ಒಬ್ಬ ವ್ಯಕ್ತಿಯ ಬಯಕೆಗಳೆಲ್ಲಾ ಇದರ ಖರ್ಚಿನಿಂದ ತೃಪ್ತಿಯಾಗುವುವು.

೨. **ಹಣ ಒಂದು ಮೌಲ್ಯಮಾಪಕ :** ಜಗತ್ತಿನಲ್ಲಿರುವ ಆರ್ಥಿಕ ವಸ್ತುಗಳ ಮೌಲ್ಯವನ್ನು ಹಣದ ರೂಪದಿಂದ ನಿಗದಿಪಡಿಸಬಹುದು. ಅಲ್ಲದೆ ಹಣದ ಸಣ್ಣ ಮೌಲ್ಯದ ನಾಣ್ಯಗಳನ್ನು ವಿವಿಧ ಪ್ರಮಾಣದ ವಿನಿಮಯ ಕಾರ್ಯಗಳಲ್ಲಿ ಉಪಯೋಗಿಸಬಹುದು.

೩. **ಮೌಲ್ಯ ಸಂಗ್ರಹದ ಸಾಧನೆ :** ಹಣವನ್ನು ಎಷ್ಟು ಸಮಯವಾದರೂ ಶೇಖರಿಸಿ ಇಡಬಹುದು. ಅದರ ಬೆಲೆ ಬದಲಾವಣೆಯಾಗುವುದಿಲ್ಲ. ಉಳಿತಾಯಮಾಡಿ ಸಂಗ್ರಹಿಸಿ ಇಟ್ಟುಕೊಂಡ ಹಣವನ್ನು ಮುಂದೆ ಯಾವ ಕಾಲದಲ್ಲಿ ಬೇಕಾದರೂ ಉಪಯೋಗಿಸಬಹುದು.

೪. **ಹಣವು ಲೆಕ್ಕಪತ್ರಗಳನ್ನಿಡುವ ಸಾಧನ :** ಹಣದ ಮೌಲ್ಯ ಸಾಮಾನ್ಯವಾಗಿ ಯಾವಾಗಲೂ ಒಂದೇಸಮನಾಗಿರುತ್ತದೆ. ಇದರಿಂದ ಸಾಲ ತೆಗೆದುಕೊಳ್ಳಲು ಮತ್ತು ಸಾಲ ಕೊಡಲು ಅನುಕೂಲವಾಗುವುದು. ಅಲ್ಲದೆ ಈಗ ಕೊಂಡ ವಸ್ತುವಿಗೆ ಮುಂದೆ ಯಾವಾಗಬೇಕಾದರೂ ಅದರ ಬೆಲೆಯನ್ನು ನಿರ್ಧರಿಸಬಹುದು.

ಈ ಮೇಲಿನ ಕೆಲಸಕಾರ್ಯಗಳನ್ನೆಲ್ಲಾ ಹಣವು ಮಾಡುತ್ತಿದ್ದು ಸರಕು ಮತ್ತು ಸೇವೆಗಳ ವಿನಿಮಯಕ್ಕೆ ಬಹಳ ಸಹಾಯಕವಾಗಿರುವುದು. ಇಂದಿನ ಜಗತ್ತಿನಲ್ಲಿ ಹಣವಿಲ್ಲದ ಯಾವ ಆರ್ಥಿಕ ವ್ಯವಸ್ಥೆಯೂ ಇರುವುದಿಲ್ಲ.

ಹಣವನ್ನು ಮುಖ್ಯವಾಗಿ ಮೂರು ಭಾಗಗಳನ್ನಾಗಿ ವರ್ಗೀಕರಿಸಬಹುದು. ಅವು ಯಾವುವೆಂದರೆ (೧) ಲೋಹರೂಪದ ಹಣ (೨) ಕಾಗದ ಹಣ ಮತ್ತು (೩) ಸಾಲರೂಪದ ಹಣ.

**ಲೋಹರೂಪದ ಹಣ :**

ಹಣವು ಹೆಚ್ಚಾಗಿ ನಾಣ್ಯಗಳ ರೂಪದಲ್ಲಿ ಇರುತ್ತದೆ. ಈ ಲೋಹರೂಪದ ಹಣದಲ್ಲಿ ಎರಡು ವಿಧ. ಪೂರ್ಣ ಲೋಹಭರಿತ ನಾಣ್ಯ ಮತ್ತು ಸಂಕೇತ ನಾಣ್ಯ. ಪೂರ್ಣ ಲೋಹಭರಿತ ನಾಣ್ಯದ ಮೌಲ್ಯ ಅದರಲ್ಲಿರುವ

ಲೋಹದಷ್ಟೇ ಇರುವುದು. ನಮ್ಮ ದೇಶದಲ್ಲಿ ೧೯೪೩ ರವರೆಗೆ ರೂಪಾಯಿ ನಾಣ್ಯವು ಪೂರ್ಣ ಲೋಹಭರಿತವಾಗಿತ್ತು. ಸಂಕೇತ ನಾಣ್ಯದ ಮೌಲ್ಯ ಅದರಲ್ಲಿರುವ ಲೋಹಾಂಶದ ಬೆಲೆಗಿಂತ ಅಧಿಕವಾಗಿರುವುದು. ಈಗಿನ ನಮ್ಮ ನಾಣ್ಯಗಳೆಲ್ಲಾ ಸಂಕೇತ ನಾಣ್ಯಗಳಾಗಿವೆ.

, ಹಣವು ಎಲ್ಲರಿಂದಲೂ ಸ್ವೀಕೃತವಾದ ವಸ್ತು. ಹಣವನ್ನು ಎಷ್ಟು ಪ್ರಮಾಣದಲ್ಲಿಯಾದರೂ ವಿನಿಮಯ ಮತ್ತು ವ್ಯವಹಾರ ಕಾರ್ಯಗಳಲ್ಲಿ ಕೊಟ್ಟರೂ ತೆಗೆದುಕೊಳ್ಳಬೇಕೆಂಬ ಸರಕಾರದ ನಿಯಮ ಇರುವುದು. ಅದರಿಂದಲೇ ನೋಟುಗಳು, ರೂಪಾಯಿ, ಮತ್ತು ಇತರ ಪ್ರಧಾನ ನಾಣ್ಯಗಳಿಗೆ ಅಪರಿಮಿತ ಗೌರವ ಇರುವುದು.

ಹಣಕ್ಕಾಗಿ ಉಪಯೋಗಿಸುವ ವಸ್ತುವಿಗೆ ಕೆಲವು ಮುಖ್ಯವಾದ ಗುಣಗಳಿರಬೇಕು. ಎಲ್ಲಾ ಬಗೆಯ ವಸ್ತುಗಳನ್ನು ಹಣದ ರೂಪದಲ್ಲಿ ಉಪಯೋಗಿಸಲು ಬರುವುದಿಲ್ಲ. ಹಣ ಎಂಬ ವಸ್ತುವಿಗೆ ಈ ಕೆಳಗಿನ ಲಕ್ಷಣಗಳಿರಬೇಕು.

೧. ಎಲ್ಲರಿಂದಲೂ ವಿನಿಮಯ ಸ್ವೀಕೃತವಾದ ವಸ್ತುವಾಗಿರಬೇಕು.

೨. ಒಂದು ಕಡೆಯಿಂದ ಮತ್ತೊಂದು ಕಡೆಗೆ ಸುಲಭವಾಗಿ ಸಾಗಿಸಲು ಬರಬೇಕು.

೩. ಹಣದ ವಸ್ತುವು ದೀರ್ಘಕಾಲದವರೆಗೆ ಬಾಳಿಕೆ ಬರುವಂತಿರಬೇಕು.

೪. ಸಣ್ಣ ಸಣ್ಣ ಮೌಲ್ಯ ಪ್ರಮಾಣದ ಅಂಶಗಳನ್ನಾಗಿ ವಿಂಗಡನೆ ಮಾಡುವುದಕ್ಕೆ ಸಾಧ್ಯವಿರಬೇಕು.

೫. ಹಣವನ್ನು ಸುಲಭವಾಗಿ ಗುರುತಿಸುವಂತಿರಬೇಕು.

ಈ ಎಲ್ಲಾ ಗುಣಗಳು ಚಿನ್ನ, ಬೆಳ್ಳಿ, ತಾಮ್ರ, ಕಂಚು ಮುಂತಾದ ಲೋಹಗಳಿಗೆ ಇರುವುದರಿಂದ ಇವುಗಳನ್ನು ನಾಣ್ಯಗಳನ್ನಾಗಿ ಮಾಡಲು ಉಪಯೋಗಿಸುವರು.

**ಕಾಗದ ಹಣ :**

ಜಗತ್ತಿನ ಪ್ರತಿಯೊಂದು ದೇಶದಲ್ಲಿಯೂ ಒಂದೊಂದು ಪ್ರಧಾನ ನಾಣ್ಯವಿರುವುದು. ಇದರ ಮೌಲ್ಯವನ್ನು ಸರಕಾರ ನಿಗದಿಪಡಿಸಿರುತ್ತದೆ. ನಮ್ಮ ದೇಶದ ಕಾಗದ ರೂಪಾಯಿಗಳಿಗೆ ಪ್ರಧಾನ ನಾಣ್ಯದ ಮೌಲ್ಯವನ್ನು

ನಿಗದಿ ಮಾಡಿರುವರು. ನಮ್ಮ ದೇಶದ ಪ್ರಧಾನ ನಾಣ್ಯವೆಂದರೆ ರೂಪಾಯಿ. ಕಾಗದದ ನೋಟುಗಳನ್ನು ಕೇವಲ ಸೌಕರ್ಯಕ್ಕಾಗಿ ಉಪಯೋಗಿಸ ಲಾಗಿದೆ. ಈ ಕಾಗದ ಹಣಕ್ಕೆ ಪ್ರತಿನಿಧಿ ಹಣವೆಂತಲೂ ಹೆಸರು ಇರುವುದು. ನಮ್ಮ ದೇಶದಲ್ಲಿ ಕಾಗದ ಹಣದ ಚಲಾವಣೆಯನ್ನು ರಿಸರ್ವ್ ಬ್ಯಾಂಕು ಹತೋಟಿ ಯಲ್ಲಿಟ್ಟುಕೊಂಡಿರುವುದು. ಚಲಾವಣೆಯಲ್ಲಿರುವ ನೋಟುಗಳಿಗೆ ಆಧಾರ ಭೂತವಾಗಿ ನಿಯಮಿತ ಮೊತ್ತದಲ್ಲಿ ಚಿನ್ನವನ್ನು ಇಡಲ್ಪಟ್ಟಿರುವುದು.

**ಸಾಲರೂಪದ ಹಣ :**

ಇದು ಮುಖ್ಯವಾಗಿ ಬ್ಯಾಂಕಿನಲ್ಲಿ ಉಂಟಾಗುವುದು. ಬ್ಯಾಂಕು ಚೆಕ್ಕುಗಳು, ವಾಗ್ದಾನ ಪತ್ರಗಳು ಮುಂತಾದವು ಈ ಗುಂಪಿಗೆ ಸೇರುವುವು. ಇವುಗಳನ್ನು ಯಾವಾಗ ಬೇಕಾದರೂ ಪಡೆದು ಖರ್ಚುಮಾಡಬಹುದು.

**ಹಣದ ಮೌಲ್ಯ ಮತ್ತು ವಸ್ತುಗಳ ಬೆಲೆ :**

ಹಣದ ಮೌಲ್ಯವೆಂದರೆ ಅದರ ವಿನಿಮಯದ ಮೌಲ್ಯ. ವಿನಿಮಯ ಮೌಲ್ಯದ ಮೂಲಕ ಸರಕು ಮತ್ತು ಸೇವೆಗಳ ಮೌಲ್ಯವನ್ನು ಹಣದ ರೂಪದಲ್ಲಿ ಹೇಳುವುದಕ್ಕೆ ಬೆಲೆ ಎನ್ನುತ್ತೇವೆ. ಹಣದ ಮೌಲ್ಯ ಏರಿದಾಗ ವಸ್ತುಗಳ ಬೆಲೆ ಕಡಿಮೆಯಾಗುವುದು. ಮತ್ತು ಹಣದ ಮೌಲ್ಯ ಇಳಿದಾಗ ವಸ್ತುಗಳ ಬೆಲೆ ಹೆಚ್ಚುವುದು.

**ಹಣದ ಉಬ್ಬರ ಮತ್ತು ಇಳಿತಾಯ :**

ವಸ್ತುಗಳ ಸರಬರಾಯಿ ಒಂದೇ ಸಮನಾಗಿದ್ದು ಹಣದ ಚಲಾವಣೆ ಹೆಚ್ಚಾದರೆ ವಸ್ತುಗಳ ಬೆಲೆ ಕೂಡ ಅಧಿಕವಾಗಿ ಏರುವುದು. ಈ ಪರಿಸ್ಥಿತಿಗೆ ಇನ್‌ಫ್ಲೇಶನ್ ಅಥವಾ ಹಣದ ಉಬ್ಬರ ಎಂದು ಕರೆಯುತ್ತೇವೆ. ಇದರಿಂದ ಸ್ಥಿರ ವರಮಾನವಿರುವ ಜನರು ಬಹಳ ತೊಂದರೆಗೀಡಾಗುವರು.

ಹಣದ ಚಲಾವಣೆ ಕಡಿಮೆಯಿದ್ದರೆ ವಸ್ತುಗಳ ಬೆಲೆ ಇಳಿಮುಖವಾಗು ವುದು. ಈ ಪರಿಸ್ಥಿತಿಗೆ ಹಣದ ಇಳಿತಾಯವೆಂದು ಅಥವಾ ಡಿಫ್ಲೇಶನ್ ಎಂದು ಕರೆಯುವರು. ಈ ಅವಸ್ಥೆಯಲ್ಲಿ ಉತ್ಪಾದನೆ ಮಾಡುವವರಲ್ಲಿ ಉತ್ಸಾಹವು ಕಡಿಮೆಯಾಗುವುದು ಮತ್ತು ಆದರಿಂದ ದೇಶದ ಆರ್ಥಿಕ ವ್ಯವಸ್ಥೆ ಇಳಿಮುಖವಾಗುವುದು.

**ಬ್ಯಾಂಕುಗಳು :**

ಬ್ಯಾಂಕು ಎಂಬುದು ಒಂದು ಹಣದ ಸಂಸ್ಥೆ. ಇದರಲ್ಲಿ ಹಣವನ್ನು ತೆಗೆದುಕೊಳ್ಳುವ ಮತ್ತು ಹಣವನ್ನು ಇಡುವ ವ್ಯವಸ್ಥೆಯಿರುವುದು. ಜನರ ಉಳಿತಾಯವನ್ನು ಠೇವಣಿಯ ಮೂಲಕ ತೆಗೆದುಕೊಂಡು ಠೇವಣಿದಾರರಿಗೆ ಸ್ವಲ್ಪ ಬಡ್ಡಿಯನ್ನು ಕೊಡುವರು. ಈ ರೀತಿ ಠೇವಣಿಗಳ ಮೂಲಕ ದೊರೆತ ಹಣವನ್ನು ಬೇಡುವವರಿಗೆ ಸಾಲದ ರೂಪದಲ್ಲಿ ಕೊಡುವುವು. ಇಂತಹ ಸಾಲಗಳ ಮೇಲೆ ಬ್ಯಾಂಕುಗಳು ಹೆಚ್ಚು ಬಡ್ಡಿಯನ್ನು ತೆಗೆದುಕೊಳ್ಳುವುವು. ಈ ರೀತಿ ಹಣದ ಎಲ್ಲಾ ರೀತಿಯ ವ್ಯವಹಾರಗಳನ್ನು ಬ್ಯಾಂಕುಗಳು ಮಾಡುವುದರಿಂದ ಇಂದಿನ ಆರ್ಥಿಕ ಕ್ಷೇತ್ರದಲ್ಲಿ ಅವುಗಳ ಪಾತ್ರ ಅತಿ ಮಹತ್ವದ್ದಾಗಿದೆ.

## ಬ್ಯಾಂಕುಗಳ ಕೆಲಸಕಾರ್ಯಗಳು

ಈಗಿನ ಕಾಲದಲ್ಲಿ ಬ್ಯಾಂಕುಗಳು ಅನೇಕ ಬಗೆಯ ಕೆಲಸಗಳನ್ನು ಮಾಡುತ್ತವೆ.

೧. ಬ್ಯಾಂಕುಗಳ ಮುಖ್ಯವಾದ ಕೆಲಸವೆಂದರೆ ಜನರಿಗೆ ಸಾಲ ಕೊಡುವುದು ಮತ್ತು ಜನರಿಂದ ಠೇವಣಿಯನ್ನು ಸ್ವೀಕರಿಸುವುದಾಗಿದೆ. ಬ್ಯಾಂಕುಗಳು ಜನರಿಗೆ ಅಲ್ಪಕಾಲಾವಧಿ ಮತ್ತು ಅಧಿಕಕಾಲಾವಧಿ ಸಾಲಗಳನ್ನು ಕೊಡುತ್ತವೆ. ಜನರ ಠೇವಣಾತಿಯನ್ನು ಬ್ಯಾಂಕುಗಳಲ್ಲಿ ಮೂರು ರೀತಿಯಾಗಿ ಇಡಬಹುದು. ಯಾವುವೆಂದರೆ ಚಾಲತಿ ಠೇವಣಾತಿ (Current deposit), ಸ್ಥಿರ ಠೇವಣಾತಿ ಮತ್ತು ಕಾಲಾವಧಿ ಠೇವಣಾತಿ.

೨. ಬ್ಯಾಂಕುಗಳು ಹಣ ಮತ್ತು ಸಾಲಗಳನ್ನು ಸೃಷ್ಟಿಸುತ್ತವೆ. ಹಣವನ್ನು ಸೃಷ್ಟಿಸುವ ಕಾರ್ಯ ದೇಶದಲ್ಲಿನ ಕೇಂದ್ರಬ್ಯಾಂಕು ಮಾಡುವುದು. ಸಾಲರೂಪದ ಹಣವನ್ನು ಚೆಕ್ಕುಗಳ ಮೂಲಕ ಮತ್ತು ಸಾಲಪತ್ರಗಳ ಮೂಲಕ ಎಲ್ಲಾ ಬ್ಯಾಂಕುಗಳು ಸೃಷ್ಟಿಸುತ್ತವೆ.

೩. ಜನರು ತಮ್ಮಲ್ಲಿರುವ ಬೆಲೆಬಾಳುವ ಒಡವೆ ವಸ್ತುಗಳನ್ನು ಬ್ಯಾಂಕುಗಳಲ್ಲಿ ಸುರಕ್ಷಿತವಾಗಿ ಇಡಬಹುದು.

೪. ಜನರ ಬಂಡವಾಳ ಪತ್ರಗಳನ್ನು ಇಟ್ಟುಕೊಂಡು ಅವುಗಳ ಮೇಲೆ ಬರುವ ಬಡ್ಡಿಯನ್ನು ವಸೂಲುಮಾಡುತ್ತವೆ.

೫. ಬ್ಯಾಂಕುಗಳು ಪರದೇಶದ ನಾಣ್ಯಗಳ ವಿನಿಮಯಕಾರ್ಯಗಳನ್ನು ಮಾಡುತ್ತವೆ.

## ಬ್ಯಾಂಕುಗಳಲ್ಲಿ ಎಷ್ಟುವಿಧ

ಇಂದು ಪ್ರತಿಯೊಂದು ದೇಶದಲ್ಲೂ ನಾನಾ ಬಗೆಯ ಬ್ಯಾಂಕುಗಳು ಇರುವುವು. ಮುಖ್ಯವಾಗಿ ವಾಣಿಜ್ಯಬ್ಯಾಂಕುಗಳು, ಬಂಡವಾಳ ಬ್ಯಾಂಕುಗಳು, ಸಹಕಾರ ಬ್ಯಾಂಕುಗಳು, ಜಮೀನು ಅಡಮಾನ ಬ್ಯಾಂಕುಗಳು, ಉಳಿತಾಯ ಬ್ಯಾಂಕುಗಳು, ವಿನಿಮಯ ಬ್ಯಾಂಕುಗಳು ಮತ್ತು ಕೇಂದ್ರಬ್ಯಾಂಕುಗಳು ಇವೇ ಪ್ರಧಾನವಾದವುಗಳು.

ವಾಣಿಜ್ಯ ಬ್ಯಾಂಕುಗಳು ಎಲ್ಲಾ ದೇಶಗಳಲ್ಲೂ ಮಹತ್ತರವಾದ ಪಾತ್ರವನ್ನು ವಹಿಸಿರುವುವು. ಇವುಗಳನ್ನು ಕೂಡುಬಂಡವಾಳ ಬ್ಯಾಂಕುಗಳೆಂದೂ ಕರೆಯಬಹುದು. ಇವುಗಳ ಹೆಸರೇ ಸೂಚಿಸುವಂತೆ, ವಾಣಿಜ್ಯ ಬ್ಯಾಂಕುಗಳು ವ್ಯಾಪಾರ ಉದ್ದಿಮೆಗಳಿಗೆ ಹೆಚ್ಚು ಸಹಾಯಮಾಡುವುವು. ಇವುಗಳು ದೇಶದಲ್ಲಿನ ಆಂತರಿಕ ವ್ಯಾಪಾರ ವಹಿವಾಟುಗಳಿಗೆ ಮಾತ್ರ ನೆರವಾಗುವುವು. ಬ್ಯಾಂಕು ಸಂಸ್ಥೆ ಸಾಧಾರಣವಾಗಿ ಯಾವ್ಯಾವಕೆಲಸ ಕಾರ್ಯಗಳನ್ನು ಮಾಡುವುವೋ, ಅವುಗಳೆಲ್ಲವನ್ನೂ ವಾಣಿಜ್ಯ ಬ್ಯಾಂಕುಗಳು ಮಾಡುವುವು.

ಬಂಡವಾಳ ಬ್ಯಾಂಕುಗಳು ಕೈಗಾರಿಕೋದ್ಯಮಿಗಳಿಗೆ ಬೇಕಾಗುವಂತಹ ಬಂಡವಾಳವನ್ನು ಅಧಿಕ ಕಾಲಾವಧಿ ಸಾಲದ ರೂಪದಲ್ಲಿ ಒದಗಿಸುವುವು.

ಕೆಲವಾರು ಸದಸ್ಯರುಗಳು ಸೇರಿ, ತಮ್ಮ ಆರ್ಥಿಕ ಚಟುವಟಿಕೆಗಳಿಗೆ ಹಣವನ್ನು ಪಡೆಯಲು ಸಹಕಾರ ಬ್ಯಾಂಕುಗಳನ್ನು ಮಾಡಿಕೊಳ್ಳುವರು. ಈ ಬ್ಯಾಂಕುಗಳು ಅಲ್ಪಪ್ರಮಾಣದಲ್ಲಿ ತಮ್ಮ ಸದಸ್ಯರುಗಳಿಗೆ ಸಾಲವನ್ನು ಕೊಡುತ್ತವೆ. ಇಂತಹ ಸಹಕಾರ ಬ್ಯಾಂಕುಗಳಿಂದ ಗ್ರಾಮಾಂತರ ವಾಸಿಗಳಿಗೆ ಮತ್ತು ಮಧ್ಯಮವರ್ಗದ ಜನರಿಗೆ ಹೆಚ್ಚು ಪ್ರಯೋಜನವುಂಟಾಗುವುದು.

ಉಳಿತಾಯ ಬ್ಯಾಂಕುಗಳು ಜನರಿಂದ ಠೇವಣಿಯನ್ನು ಸ್ವೀಕರಿಸಿ ಸರಕಾರಕ್ಕೆ ಮಾತ್ರ ಸಾಲಕೊಡುತ್ತವೆ. ತಮ್ಮ ದೈನಂದಿನ ವ್ಯವಹಾರಕ್ಕೆ [illegible] ಹಣವನ್ನು ಇಟ್ಟುಕೊಂಡು ಉಳಿದದ್ದನ್ನು ಸರಕಾರಕ್ಕೆ ಸಾಲವನ್ನಾಗಿ ಕೊಡುತ್ತವೆ. ಜನರ ಠೇವಣಾತಿಗೆ ಸ್ವಲ್ಪ ಬಡ್ಡಿ ಕೊಡಲ್ಪಡುವುದು. ಎಲ್ಲಿ

ದಕ್ಕೊ ಮುಖ್ಯವಾಗಿ ಜನರು ತಮ್ಮ ಠೇವಣಾತಿಗಳನ್ನು ಹಿಂದಕ್ಕೆ ತೆಗೆದು ಕೊಳ್ಳುವ ಕಾಲವನ್ನು ನಿಗದಿಮಾಡಿರುವುದು. ಇದರಿಂದ ಅಲ್ಪ ಆದಾಯ ವಿರುವ ಜನರಿಗೆ ತುಂಬಾ ಪ್ರಯೋಜನವುಂಟಾಗುವುದು.

ವಿನಿಮಯ ಬ್ಯಾಂಕುಗಳು ವಿದೇಶೀ ನಾಣ್ಯಗಳ ವಿನಿಮಯ ಕಾರ್ಯ ಗಳನ್ನು ಮಾಡುತ್ತವೆ. ಒಂದು ದೇಶದ ಹಣವನ್ನು ಮತ್ತೊಂದು ದೇಶದ ಹಣಕ್ಕೆ ನಿಗದಿಸಲ್ಪಟ್ಟ ಮೌಲ್ಯದ ಮೇಲೆ ಬದಲಾಯಿಸಿಕೊಡುವುವು. ಇದ ರಿಂದ ಆಮದು ಮತ್ತು ರಫ್ತು ಕಾರ್ಯಗಳಿಗೂ ಮತ್ತು ಅಂತರರಾಷ್ಟ್ರೀಯ ವಾಣಿಜ್ಯ ಅಭಿವೃದ್ಧಿಗೂ ಹೆಚ್ಚು ಸಹಕಾರಿಯಾಗಿರುವುವು.

## ಕೇಂದ್ರ ಬ್ಯಾಂಕುಗಳು

ಎಲ್ಲಾ ದೇಶಗಳಲ್ಲೂ ಒಂದೊಂದು ಸೆಂಟ್ರಲ್ ಅಥವಾ ಕೇಂದ್ರ ಬ್ಯಾಂಕು ಇರುವುದು. ದೇಶದ ಆರ್ಥಿಕ ಸ್ಥಿತಿಯನ್ನು ನಿಯಂತ್ರಿಸುವುದೇ ಇದರ ಪ್ರಧಾನವಾದ ಕಾರ್ಯ. ಭಾರತದೇಶದಲ್ಲಿನ ಕೇಂದ್ರ ಬ್ಯಾಂಕು ಎಂದರೆ ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ ಆಗಿರುವುದು. ಬೇರೆ ಬೇರೆ ದೇಶದ ಕೇಂದ್ರ ಬ್ಯಾಂಕುಗಳಿಗೆ ಬೇರೆ ಬೇರೆ ಹೆಸರುಗಳಿರುವುವು.

## ಕೇಂದ್ರ ಬ್ಯಾಂಕಿನ ಮುಖ್ಯ ಕೆಲಸಗಳು

೧. ನೋಟು ಮುದ್ರಣದ ಸ್ವಾಮ್ಯತೆ:

ದೇಶದಲ್ಲಿ ಆರ್ಥಿಕ ವ್ಯವಹಾರಕ್ಕೆ ಬೇಕಾಗುವ ಹಣದ ನೋಟುಗಳನ್ನು ಮುದ್ರಣ ಮಾಡಿ ಚಲಾವಣೆಗೆ ತರುವ ಏಕಸ್ವಾಮ್ಯತೆಯನ್ನು ಈ ಕೇಂದ್ರ ಬ್ಯಾಂಕು ಪಡೆದಿರುವುದು. ಇದೇ ಇದರ ಮುಖ್ಯವಾದ ಕೆಲಸವೆನ್ನಬಹುದು. ನೋಟುಗಳನ್ನು ಮುದ್ರಿಸುವ ಹಕ್ಕು ಬೇರೆ ಯಾವ ಬ್ಯಾಂಕಿಗೂ ಇರುವುದಿಲ್ಲ.

೨. ಇದು ಬ್ಯಾಂಕರುಗಳ ಬ್ಯಾಂಕು:

ಪ್ರತಿಯೊಂದು ದೇಶದಲ್ಲಿ ಕೇಂದ್ರ ಬ್ಯಾಂಕು ದೇಶದಲ್ಲಿನ ಇತರ ಎಲ್ಲಾ ಬ್ಯಾಂಕುಗಳನ್ನು ಹತೋಟಿಯಲ್ಲಿಟ್ಟುಕೊಂಡಿರುವುದು. ಎಲ್ಲಾ ದೇಶಗಳಲ್ಲೂ ಇದೇ ಹಿರಿಯ ಬ್ಯಾಂಕು. ಇತರ ಎಲ್ಲಾ ಬ್ಯಾಂಕುಗಳು ಇದರ ಸದಸ್ಯತ್ವವನ್ನು ಹೊಂದಿರಬೇಕು ಮತ್ತು ನಿಯಮಿತ ಶೇಕಡ

ಹಣವನ್ನು ಇದರಲ್ಲಿ ಠೇವಣಿಯಾಗಿ ಇಡಬೇಕು. ಎಲ್ಲಾ ಬ್ಯಾಂಕುಗಳು ವಾರಾಂತ್ಯದಲ್ಲಿ ತಮ್ಮ ವ್ಯವಹಾರಗಳನ್ನು ಕೇಂದ್ರ ಬ್ಯಾಂಕಿಗೆ ತಿಳಿಸಬೇಕು. ಈ ಬ್ಯಾಂಕಿನ ಸಮ್ಮತಿಯಿಲ್ಲದೆ ಯಾವ ಹೊಸ ಬ್ಯಾಂಕು ಸ್ಥಾಪನೆಯಾಗ ಲಾರದು.

**೩. ಇದು ಸರಕಾರದ ಬ್ಯಾಂಕು :**

ಕೇಂದ್ರ ಬ್ಯಾಂಕು ಸರಕಾರದ ಠೇವಣಿಗಳನ್ನು ಇಟ್ಟುಕೊಳ್ಳುವುದು. ಮತ್ತು ಸರಕಾರದ ಪರವಾಗಿ ಹಣವನ್ನು ಕೊಡುವ ಕೆಲಸವನ್ನೂ ಮಾಡು ವುದು. ಸರಕಾರಿ ನೌಕರರ ಸಂಬಳ, ತೆರಿಗೆ ಹಣ ಸ್ವೀಕಾರ, ಸರಕಾರದ ಸಾಲವನ್ನು ಹಿಂದಿರುಗಿಸುವುದು ಇವೇ ಮೊದಲಾದ ಸರಕಾರದ ಕಾರ್ಯಗಳನ್ನು ಮಾಡುವುದು.

**೪. ಹಣದ ಪೇಟೆಯ ಮೇಲ್ವಿಚಾರಣೆ :**

ದೇಶದಲ್ಲಿನ ವಸ್ತುಗಳ ಬೆಲೆಗಳು ಹಣದ ಏರಿಳಿತದ ದೆಸೆಯಿಂದ ಅಧಿಕವಾಗಿ ಹೆಚ್ಚು ಕಡಿಮೆಯಾಗದಂತೆ ನೋಡಿಕೊಳ್ಳುವುದು. ಹೊಸ ಉದ್ದಿಮೆಗಳ ಸ್ಥಾಪನೆಗೆ ಸಹಾಯ ನೀಡುವುದು, ದೇಶದಲ್ಲಿ ಬಂಗಾರವನ್ನು ಕೊಳ್ಳುವುದು ಮತ್ತು ಮಾರುವುದು ಮೊದಲಾದ ಹಣದ ಪೇಟೆಯ ಕೆಲಸ ಗಳನ್ನೆಲ್ಲಾ ಈ ಬ್ಯಾಂಕು ನಿರ್ವಹಿಸುವುದು.

**೫. ಇದು ಕೊನೆ ಗಳಿಗೆಯ ಸಹಾಯಕ :**

ದೇಶದ ಇತರ ಬ್ಯಾಂಕುಗಳಿಗೆ ತಮ್ಮ ಆರ್ಥಿಕ ದುಸ್ಥಿತಿಯಲ್ಲಿ ಸಹಾಯ ಮಾಡುವ ಸಾಹುಕಾರ ಬ್ಯಾಂಕು ಇದಾಗಿರುವುದು. ಇತರ ಬ್ಯಾಂಕುಗಳು ಆರ್ಥಿಕ ಸಂಕಷ್ಟಕ್ಕೆ ಒಳಗಾದಾಗ ಕೇಂದ್ರ ಬ್ಯಾಂಕು ಅವುಗಳ ನೆರವಿಗೆ ಬರುವುದು.

## ಭಾರತದಲ್ಲಿ ಬ್ಯಾಂಕಿಂಗ್ ವ್ಯವಸ್ಥೆ

ನಮ್ಮ ಭಾರತದಲ್ಲಿ ಬ್ಯಾಂಕಿಂಗ್ ವ್ಯವಹಾರ ಬಹಳ ಹಿಂದಿನ ಕಾಲದಿಂದಲೂ ನಡೆದು ಬಂದಿದೆ. ಪೂರ್ವಕಾಲದಲ್ಲಿ ಕೇವಲ ಒಬ್ಬೊಬ್ಬ ವ್ಯಕ್ತಿಗಳು ಈ ಕೆಲಸವನ್ನು ಮಾಡುತ್ತಿದ್ದರು. ೧೭ ಮತ್ತು ೧೮ ನೆಯ

ಶತಮಾನಗಳಲ್ಲಿ ಪಾಶ್ಚಾತ್ಯ ರೀತಿಯ ಬ್ಯಾಂಕಿಂಗ್ ಪದ್ಧತಿಯು ನಮ್ಮಲ್ಲಿ ಆರಂಭವಾಯಿತು. ೧೮೦೬ ರಲ್ಲಿ ಕಲ್ಕತ್ತ ಪ್ರಾಂತೀಯ ಬ್ಯಾಂಕು, ೧೮೪೦ರಲ್ಲಿ ಮುಂಬಯಿ ಪ್ರಾಂತೀಯ ಬ್ಯಾಂಕು, ಮತ್ತು ೧೮೪೩ ರಲ್ಲಿ ಮದರಾಸು ಪ್ರಾಂತೀಯ ಬ್ಯಾಂಕು ಸ್ಥಾಪಿತವಾದುವು. ೧೯೨೧ ರಲ್ಲಿ ಈ ಮೂರು ಬ್ಯಾಂಕುಗಳನ್ನು ಒಂದುಗೂಡಿಸಿ ಇಂಪೀರಿಯಲ್ ಬ್ಯಾಂಕು ಎಂದು ಮಾಡಲಾಯಿತು. ೧೯೫೫ ರಲ್ಲಿ ಭಾರತ ಸರಕಾರ ಇಂಪೀರಿಯಲ್ ಬ್ಯಾಂಕನ್ನು ರಾಷ್ಟ್ರೀಕರಣ ಮಾಡಿ "ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ" ಎಂಬ ಹೆಸರನ್ನು ಕೊಟ್ಟರು. ಈಗ ನಮ್ಮ ದೇಶದಲ್ಲಿ ಎಲ್ಲಾ ಬಗೆಯ ಬ್ಯಾಂಕುಗಳು ಇರುವುವು.

ಭಾರತದ ರಿಸರ್ವ್ ಬ್ಯಾಂಕು ೧೯೩೫ ರಲ್ಲಿ ಸ್ಥಾಪಿತವಾಯಿತು. ೧೯೪೯ರ ವರೆಗೂ ಅದು ಒಂದು ಷೇರುದಾರರ ಬ್ಯಾಂಕಾಗಿ ಕೆಲಸಮಾಡಿತು. ೧೯೪೯ ರಲ್ಲಿ ಅದನ್ನು ರಾಷ್ಟ್ರೀಕರಣ ಮಾಡಲಾಯಿತು. ಎಲ್ಲಾ ದೇಶಗಳ ಕೇಂದ್ರ ಬ್ಯಾಂಕುಗಳು ಮಾಡುವ ಕೆಲಸಗಳನ್ನು ಇದು ನಮ್ಮ ದೇಶದಲ್ಲಿ ಮಾಡುವುದು. ನಮ್ಮ ರಿಸರ್ವ್ ಬ್ಯಾಂಕಿನಲ್ಲಿ ಎರಡು ಪ್ರಧಾನ ಶಾಖೆಗಳಿವೆ. ಒಂದನೆಯದು ಚಲಾವಣಾ ಶಾಖೆ ಮತ್ತು ಎರಡನೆಯದು ಬ್ಯಾಂಕಿಂಗ್ ಶಾಖೆ.

ಚಲಾವಣಾ ಶಾಖೆಯ ಮುಖ್ಯ ಕಾರ್ಯ ಹಣವನ್ನು ಸಾರ್ವಜನಿಕರಿಗೆ ಕಾಗದ ನೋಟುಗಳ ಮೂಲಕ ಒದಗಿಸುವುದು. ಬ್ಯಾಂಕಿಂಗ್ ಶಾಖೆಯಲ್ಲಿ ಎಲ್ಲಾ ನಮೂನೆಯ ಬ್ಯಾಂಕು ವ್ಯವಹಾರಗಳು ನಡೆಯುವುವು. ರಿಸರ್ವ್ ಬ್ಯಾಂಕು ನಮ್ಮ ದೇಶದ ಇತರ ಬ್ಯಾಂಕುಗಳ ಮೇಲೆ ಹತೋಟಿಯನ್ನಿಟ್ಟಿರುವುದು. ವಿದೇಶೀ ನಾಣ್ಯಗಳ ವಿನಿಮಯ ದರವನ್ನು ನಿಗದಿಪಡಿಸುತ್ತದೆ. ಕೇಂದ್ರ ಬ್ಯಾಂಕು ಮಾಡುವ ಎಲ್ಲ ಕೆಲಸ ಕಾರ್ಯಗಳನ್ನು ನಮ್ಮ ದೇಶದಲ್ಲಿ ಈ ಬ್ಯಾಂಕು ಮಾಡುತ್ತದೆ.



## ಅಭ್ಯಾಸ ೭

# ಆರ್ಥಿಕ ಮಾದರಿಗಳು

## ೧. ಬಂಡವಾಳ ಪದ್ಧತಿ

ದೇಶದಲ್ಲಿನ ಎಲ್ಲ ಉತ್ಪಾದಕ ಸಾಧನಗಳು ಜನರ ಸ್ವಂತ ಒಡೆತನ ದಲ್ಲಿದ್ದರೆ ಅಂತಹ ಆರ್ಥಿಕ ಸ್ಥಿತಿಗೆ ಬಂಡವಾಳ ಪದ್ಧತಿ ಎನ್ನುವರು. ಈ ವ್ಯವಸ್ಥೆಯಲ್ಲಿ ಪ್ರಧಾನವಾಗಿ ಏಕ ವ್ಯಕ್ತಿ ಯಜಮಾನೀಯ ಸಂಸ್ಥೆಗಳು, ಪಾಲುದಾರ ಸಂಸ್ಥೆಗಳು ಮತ್ತು ಕೂಡು ಬಂಡವಾಳ ಕಂಪನಿಗಳು ಇರುವುವು. ಬಂಡವಾಳ ಪದ್ಧತಿಯಲ್ಲಿ ಖಾಸಗೀ ಉದ್ಯಮಿಗಳು ಹೆಚ್ಚು ಹೆಚ್ಚು ಲಾಭಹೊಂದಲು ಪ್ರಯತ್ನಿಸುವರು. ಪ್ರತಿಯೊಬ್ಬ ವ್ಯಕ್ತಿಗೆ ಆಸ್ತಿ ಪಾಸ್ತಿಗಳನ್ನು ಹೊಂದುವ ಮತ್ತು ವೃದ್ಧಿಗೊಳಿಸುವ ಹಕ್ಕು ಇರುವುದು. ಜನರು ತಮಗೆ ಬೇಕಾದ ವೃತ್ತಿಯನ್ನು ಕೈಗೊಳ್ಳಬಹುದು. ಒಟ್ಟಿನಲ್ಲಿ ರಾಷ್ಟ್ರದ ಎಲ್ಲಾ ಆರ್ಥಿಕ ಚಟುವಟಿಕೆಗಳು ವ್ಯಕ್ತಿಗತವಾಗಿರುವುವು. ಇದರಲ್ಲಿ ಜನರ ಆರ್ಥಿಕ ಜೀವನದಲ್ಲಿ ಸರಕಾರದ ಪ್ರಭಾವ ಅತೀ ಕಡಿಮೆ ಯಿರುವುದು.

**ಇದರ ಅನುಕೂಲತೆಗಳು :**

೧. ಬಂಡವಾಳ ಪದ್ಧತಿಯು ವ್ಯಕ್ತಿಗಳಿಗೆ ಆರ್ಥಿಕ ಸ್ವಾತಂತ್ರ್ಯವನ್ನು ಕೊಟ್ಟಿರುವುದು. ಇದರಿಂದ ಜನರಿಗೆ ತಾವು ಕೈಗೊಳ್ಳುವ ಕೈಗಾರಿಕೆ, ಅಥವಾ ಬೇಸಾಯ ಅಥವಾ ಇತರ ಯಾವುದಾದರೂ ಉದ್ದಿಮೆಯಲ್ಲಿ ಆಸಕ್ತಿ ಉಂಟಾಗುವುದು. ಇದರಿಂದ ದೇಶದ ಆರ್ಥಿಕಾಭಿವೃದ್ಧಿಗೆ ಹೆಚ್ಚು ಸಹಾಯಕಾರಿಯಾಗುವುದು.

೨. ಈ ಸ್ಥಿತಿಯಲ್ಲಿ ಆರ್ಥಿಕ ಕ್ಷೇತ್ರದಲ್ಲಿ ಪೈಪೋಟಿಯುಂಟಾಗು ವುದು. ಇದರಿಂದ ಉತ್ಪಾದಕರು ಉತ್ತಮ ಮಟ್ಟದ ವಸ್ತುಗಳನ್ನು ಉಂಟು ಮಾಡುವರು. ಬೆಲೆಯಲ್ಲಿ ಕೂಡ ಪೈಪೋಟಿಯುಂಟಾಗುವುದರಿಂದ ಬಡವರಿಗೆ ಮತ್ತು ಮಧ್ಯಮ ವರ್ಗದವರಿಗೆ ಹೆಚ್ಚು ಪ್ರಯೋಜನವಾಗುವುದು.

೩. ಉತ್ಪಾದನಾ ವಿಧಾನದಲ್ಲಿ ಹೊಸ ಬಗೆಯ ಸಂಶೋಧನೆಗಳನ್ನು ಮಾಡಲಾಗುವುದು. ಉತ್ಪಾದಕರಲ್ಲಿ ಪೈಪೋಟಿ ಹುಟ್ಟುವುದರಿಂದ ಉತ್ಪಾದನಾ ವಿಧಾನದಲ್ಲಿ ಕೂಡ ಮುನ್ನಡೆಯುಂಟಾಗುವುದು.

**ಬಂಡವಾಳ ಪದ್ಧತಿಯ ಲೋಪದೋಷಗಳು:**

೧. ಸಮಾಜದ ಸಂಪತ್ತು ಮತ್ತು ಉತ್ಪಾದನೆಯ ಹಂಚುವಿಕೆಯಲ್ಲಿ ಹೆಚ್ಚಾದ ಅಸಮಾನತೆ ತಲೆದೋರುವುದು.

೨. ಜನರಲ್ಲಿ ಬಂಡವಾಳಗಾರರು ಮತ್ತು ಕೂಲಿಕಾರರು ಎಂಬ ಎರಡು ಪ್ರಮುಖ ಪಂಗಡಗಳುಂಟಾಗಿ, ಅವರಲ್ಲಿ ವೈಮನಸ್ಸು ಮೂಡುವುದು. ಇದರಿಂದ ರಾಷ್ಟ್ರದ ಅಭಿವೃದ್ಧಿಗೆ ಧಕ್ಕೆಯುಂಟಾಗುವುದು.

೩. ಬಂಡವಾಳ ಪ್ರಭುತ್ವವಿರುವಲ್ಲಿ ಆರ್ಥಿಕ ಪರಿಸ್ಥಿತಿ ಸಮಾಜವನ್ನು ಒಡೆದುಹಾಕಿಬಿಡುವುದು. ಐಶ್ವರ್ಯವಂತರು ಮತ್ತು ಬಡವರು ಎಂಬ ಭೇದ ದಿನೇ ದಿನೇ ಹೆಚ್ಚಾಗುವುದು.

## ೨. ಸಮಾಜವಾದ ಪದ್ಧತಿ

ಬಂಡವಾಳ ಪದ್ಧತಿಯ ಕುಂದುಕೊರತೆಗಳನ್ನು ಹೋಗಲಾಡಿಸಿ, ಸಮಾಜವನ್ನು ಸಮತಾವಾದ ತತ್ವದ ಮೇಲೆ ರಚನೆ ಮಾಡುವುದೇ ಸಮಾಜವಾದ ಪದ್ಧತಿಯ ಮೂಲಧ್ಯೇಯವಾಗಿರುವುದು. ಈ ಸಮತಾವಾದ ತತ್ವಕ್ಕೆ ಒಂದು ರೂಪುರೇಷೆಯನ್ನು ಹಾಕಿಕೊಟ್ಟವರೆಂದರೆ ಜರ್ಮನಿಯ ಕಾರ್ಲ್ ಮಾರ್ಕ್ಸ್ ಎಂಬ ತಜ್ಞನು. ಇವರು ರೂಪಿಸಿದ ಸಮಾಜ ಸ್ಥಿತಿಗೆ 'ಕಮ್ಯೂನಿಸಂ' ಎಂದು ಹೆಸರು. ಈ ತತ್ವವನ್ನೊಳಗೊಂಡ ಸಮಾಜದಲ್ಲಿ ವೈಯಕ್ತಿಕ ಉದ್ಯಮ ಸಾಹಸಕ್ಕೆ ಅವಕಾಶವಿರುವುದಿಲ್ಲ. ಉತ್ಪಾದನೆ ಮತ್ತು ವಿತರಣೆ ಸಾಮೂಹಿಕ ಹಕ್ಕಿಗೆ ಒಳಪಟ್ಟಿರುವುದು. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಶಕ್ತ್ಯಾನುಸಾರ ದುಡಿಯಲೇ ಬೇಕು. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಅವಶ್ಯಕತೆಗಳಿಗನುಸಾರವಾಗಿ ಸರಕು ಸೇವೆಗಳನ್ನು ಹೊಂದುವನು. ಸಾಮಾಜಿಕ ಸಹಕಾರ ತಾನಾಗಿಯೇ ನೆಲೆಸುವುದು. ಇಂದು ಜಗತ್ತಿನ ಅನೇಕ ರಾಷ್ಟ್ರಗಳು ಸಮತಾ ಸಮಾಜ ಪದ್ಧತಿಯನ್ನು ಅನುಸರಿಸಿವೆ. ಬಂಡವಾಳ ಪ್ರಭುತ್ವ ರಾಷ್ಟ್ರಗಳಲ್ಲೂ ಕೂಡ ಈ ಪದ್ಧತಿ ತಲೆ ಎತ್ತುತ್ತಿದೆ.

ಸಮಾಜವಾದ ಪದ್ಧತಿಯು ಒಂದು ರೀತಿಯಲ್ಲಿ ಬಹಳ ಉತ್ತಮವಾದ ವ್ಯವಸ್ಥೆ. ಇದರಲ್ಲಿ ಮುಖ್ಯವಾಗಿ ಉತ್ಪಾದನೆಯ ಸಾಧನೆಗಳೆಲ್ಲವೂ ಸಮಾಜದ ಆಸ್ತಿಯಾಗಿರುತ್ತವೆ. ವ್ಯಕ್ತಿಗಳಲ್ಲಿ ಸ್ವಾರ್ಥ ಮನೋಭಾವ ಉಂಟಾಗಲು ಸಾಧ್ಯವಾಗುವುದಿಲ್ಲ. ದೇಶದ ವರಮಾನ ಎಲ್ಲರಲ್ಲಿಯೂ ಸಮಾನವಾಗಿ ಹಂಚಿಕೆಯಾಗುವುದು. ಆದರೆ ಈ ಪದ್ಧತಿಯಲ್ಲಿ ವ್ಯಕ್ತಿಸ್ವಾತಂತ್ರ್ಯ ಕಡಿಮೆ. ಎಲ್ಲರೂ ಸಮಾಜದ ಹಿತಕ್ಕಾಗಿ ದುಡಿಯಬೇಕಾಗುವುದು. ವೈಯಕ್ತಿಕ ಹಿತ ದೃಷ್ಟಿ ಹೆಚ್ಚಾಗಿ ಇಲ್ಲದಿರುವುದರಿಂದ ಜನರಿಗೆ ಕೆಲಸಕಾರ್ಯಗಳಲ್ಲಿ ಹೆಚ್ಚಿನ ಶ್ರದ್ಧೆಯಿರುವುದಿಲ್ಲ. ಇಂದು ರಷ್ಯಾದೇಶದಲ್ಲಿನ ಜನರಲ್ಲಿ ಕಾರ್ಯದಕ್ಷತೆಯನ್ನುಂಟುಮಾಡಲು ಅನೇಕ ರೀತಿಯ ಉತ್ತೇಜನಗಳನ್ನಿತ್ತು ಯಶಸ್ವಿಯಾಗಿರುವರು.

ನಮ್ಮ ಭಾರತದೇಶದಲ್ಲಿ ಕೂಡ ಸಮಾಜವಾದ ಪದ್ಧತಿ ಸ್ವಾತಂತ್ರ್ಯದ ನಂತರ ತಲೆಯೆತ್ತಿರುವುದು. ಇಂದು ಸಮತಾ ಸಮಾಜವನ್ನು ಸೃಷ್ಟಿಸುವುದೇ ನಮ್ಮ ಸರಕಾರದ ಗುರಿಯಾಗಿರುವುದು. ಇದರ ಮುಖ್ಯ ತತ್ವಗಳನ್ನು ನಮ್ಮ ಮೂಲಭೂತ ಹಕ್ಕುಗಳಲ್ಲಿ ಅಳವಡಿಸಿರುವರು. ನಮ್ಮ ದೇಶದ ಪಂಚವಾರ್ಷಿಕ ಯೋಜನೆಗಳ ಗುರಿ ಕೂಡ ಇದೇ ಆಗಿರುವುದು.

ಸಮತಾ ಸಮಾಜ ಸ್ಥಾಪನೆಯ ದಿಶೆಯಲ್ಲಿ ನಮ್ಮ ದೇಶದಲ್ಲಿ ಕೈಗೊಂಡಿರುವ ಮುಖ್ಯ ಕಾರ್ಯಗಳೆಂದರೆ :—

೧. ವಿದ್ಯಾಭ್ಯಾಸ ಮತ್ತು ಉದ್ಯೋಗಕ್ಕೆ ಎಲ್ಲರಿಗೂ ಸಮಾನ ಅವಕಾಶ ಕಲ್ಪಿಸಿಕೊಡಲಾಗಿರುವುದು.

೨. ಎಲ್ಲ ಪ್ರಜೆಗಳಿಗೂ ಸಮಾನ ರಾಜಕೀಯ ಮತ್ತು ಸಾಮಾಜಿಕ ಹಕ್ಕುಬಾಧ್ಯತೆಯಿರುವುದು.

೩. ವೈಯಕ್ತಿಕ ಆಸ್ತಿ ಮತ್ತು ಇತರ ಸಂಪತ್ತುಗಳು ಇಷ್ಟೇ ಇರಬೇಕೆಂದು ನಿಗದಿಪಡಿಸಲಾಗಿರುವುದು.

೪. ದೊಡ್ಡ ದೊಡ್ಡ ಉತ್ಪಾದನಾ ಉದ್ದಿಮೆಗಳನ್ನು ರಾಷ್ಟ್ರೀಕರಣ ಮಾಡುತ್ತಾ ಹೋಗುವುದು.

## ೩. ಮಿಶ್ರ ಆರ್ಥಿಕತೆ

ಪೂರ್ಣ ಬಂಡವಾಳ ಪದ್ಧತಿಗೂ ಮತ್ತು ಪೂರ್ಣ ಸಮಾಜವಾದ ಪದ್ಧತಿಗೂ ನಡುವೆ ಇರುವ ಆರ್ಥಿಕ ಸ್ಥಿತಿಯೇ ಮಿಶ್ರ ಆರ್ಥಿಕತೆಯೆನಿಸುವುದು. ಇದರಲ್ಲಿ ದೇಶದ ಆರ್ಥಿಕೋದ್ಯಮಗಳನ್ನು ಸರಕಾರವೂ ಮತ್ತು ಖಾಸಗೀ ಜನರೂ ಮಾಡುವರು.

ಮಿಶ್ರ ಆರ್ಥಿಕತೆ ಪದ್ಧತಿಯಲ್ಲಿ ಉದ್ದಿಮೆಗಳು ಮೂರು ಹಂತಗಳಲ್ಲಿ ನಡೆಯುವುವು. ಕೆಲವು ಉದ್ದಿಮೆಗಳನ್ನು ಸರಕಾರವೇ ನಡೆಸುವುದು. ಇನ್ನು ಕೆಲವು ಉದ್ದಿಮೆಗಳನ್ನು ಖಾಸಗೀ ವಲಯದಲ್ಲೇ ನಡೆಸುವುದು. ಮೂರನೆಯದಾಗಿ ಕೆಲವು ಉದ್ದಿಮೆಗಳನ್ನು ಸರಕಾರ ಮತ್ತು ಖಾಸಗೀ ಜನರು ಕೂಡಿ ನಡೆಸುವುದು. ನಮ್ಮ ದೇಶದಲ್ಲಿ ಈಗ ಹೆಚ್ಚಾಗಿ ಮೊದಲ ಎರಡು ಹಂತಗಳಲ್ಲಿ ಉದ್ದಿಮೆಗಳು ಸಾಗುತ್ತಿರುವುದು. ಉದಾ :-ರಕ್ಷಣೆ, ದೊಡ್ಡ ಕೈಗಾರಿಕೆಗಳು ಮುಂತಾದ ೧೭ ಉದ್ದಿಮೆಗಳು ಪೂರ್ಣ ಸರಕಾರದ ವಲಯದಲ್ಲಿ ನಡೆಯುತ್ತವೆ. ವ್ಯವಸಾಯ, ಗುಡಿ ಕೈಗಾರಿಕೆಗಳು ಮೊದಲಾದವು ಖಾಸಗೀ ವಲಯದಲ್ಲಿ ಸಾಗುತ್ತಿರುವುದು ಮಿಶ್ರ ಆರ್ಥಿಕತೆ ಸಮಾಜ ಪದ್ಧತಿಯೆಡೆಗೆ ದೇಶವನ್ನು ಒಯ್ಯುವ ಒಂದು ಮುಖ್ಯ ಮಾರ್ಗವಾಗಿರುವುದು.

## ೪. ಸಹಕಾರ ಪದ್ಧತಿ

ಸಹಕಾರ ಎಂಬ ಪದಕ್ಕೆ "ಎಲ್ಲರೂ ಒಟ್ಟುಗೂಡಿ" ಮಾಡುವುದು ಎಂಬ ಅರ್ಥವಾಗುವುದು. ಯಾವ ಕೆಲಸವನ್ನಾಗಲೀ ಹಲವಾರು ಜನರು ಒಂದುಗೂಡಿ ಮಾಡುವುದೇ ಸಹಕಾರ ಕ್ರಮವೆನ್ನಿಸುವುದು. ಅರ್ಥಶಾಸ್ತ್ರದಲ್ಲಿ ಸಹಕಾರ ಎಂಬ ಪದಕ್ಕೆ ಬಹಳ ವಿಶಾಲವಾದ ವಿವರಣೆಯಿರುವುದು. ಈ ಪದ್ಧತಿಯು ಮುಖ್ಯವಾಗಿ ಕೆಲವಾರು ತತ್ವಗಳನ್ನು ಹೊಂದಿರುತ್ತದೆ.

೧. ಸಹಕಾರ ಕ್ರಮದಲ್ಲಿ ಒಂದಾಗುವ ಪ್ರತಿಯೊಬ್ಬ ವ್ಯಕ್ತಿಯೂ ಸಮಾನವಾದ ಜವಾಬ್ದಾರಿಯನ್ನು ಹೊಂದಬೇಕಾಗುವುದು.

೨. ಸದಸ್ಯರು ಸಹಕಾರ ಉದ್ದಿಮೆಗಳಲ್ಲಿ ಎಷ್ಟು ಷೇರು ಹಣ ಹಾಕಿದ್ದರೂ ಕೂಡ ಎಲ್ಲರಿಗೂ ವೈಯಕ್ತಿಕವಾಗಿ ಒಂದೇ ಒಂದು ಮತದಾನದ ಹಕ್ಕಿರುವುದು.

೩. ಈ ಪದ್ಧತಿಯ ಮೂಲ ತತ್ವವೆಂದರೆ “ ತನಗಾಗಿ ಎಲ್ಲರೂ ಮತ್ತು ಎಲ್ಲರಿಗಾಗಿ ತಾನೂ ದುಡಿಯಬೇಕು. ” ಎಂಬುದಾಗಿದೆ.

೪. ಈ ಪದ್ಧತಿಯಲ್ಲಿ ಬಡವ ಬಲ್ಲಿದನೆಂಬ, ಮೇಲು ಕೀಳೆಂಬ ಭಿನ್ನ ಭೇದವಿರುವುದಿಲ್ಲ. ಸರ್ವರೂ ಸಮಾನವೆಂದೆಣಿಸಿ ಒಗ್ಗಟ್ಟಿನಿಂದ ದುಡಿಯಬೇಕು.

೫. ಇದರಲ್ಲಿ ವ್ಯಕ್ತಿಗಳಿಗೆ ಆರ್ಥಿಕ ಸ್ವಾತಂತ್ರ್ಯ ಇರುವುದು. ಯಾವ ರೀತಿಯ ಬಲಾತ್ಕಾರವಿರುವುದಿಲ್ಲ. ಎಲ್ಲರೂ ತಮ್ಮ ವೈಯಕ್ತಿಕ ಇಚ್ಛೆಯಂತೆ ನಡೆಯುವ ಸ್ವಾತಂತ್ರ್ಯವಿರುವುದು.

೬. ಈ ಕ್ರಮದಲ್ಲಿ ವೈಯಕ್ತಿಕ ಮತ್ತು ಸಾಮೂಹಿಕ ಲಾಭ ಮತ್ತು ಸಮಾಜ ಸೇವಾ ದೃಷ್ಟಿ ಅಧಿಕವಾಗಿರುವುದು.

ಸಹಕಾರ ಪದ್ಧತಿಯನ್ನು ಒಂದು ನಿರ್ದಿಷ್ಟವಾದ ರೂಪದಲ್ಲಿ ಪ್ರಚಾರ ಮಾಡಿದವರೆಂದರೆ ಜರ್ಮನಿಯ ರೈಫಿಸಾನ್ ಮತ್ತು ಷೂಲ್ಸ್-ಡಿ-ಅಟ್ಸ್ ಎಂಬವರು. ರೈಫಿಸಾನ್ ಸಹಕಾರಸಂಘಗಳ ಮುಖ್ಯ ಲಕ್ಷಣಗಳೆಂದರೆ—

೧. ಸಂಘದ ವ್ಯಾಪ್ತಿ ಮತ್ತು ಕಾರ್ಯಕ್ಷೇತ್ರ ನಿರ್ದಿಷ್ಟ ಮಿತಿಯಿಂದ ಕೂಡಿರಬೇಕು.

೨. ಸಂಘದ ಪ್ರತಿಯೊಬ್ಬ ಸದಸ್ಯನನ್ನು ಇತರರು ತಿಳಿದವರಿರಬೇಕು. ಅಂದರೆ ಎಲ್ಲಾ ಸದಸ್ಯರು ಒಂದೇ ಸ್ಥಳದವರಿದ್ದು ಪರಸ್ಪರ ಪರಿಚಿತರಿರಬೇಕು.

೩. ಸಾಲಗಳನ್ನು ಸಂಘದ ಸದಸ್ಯರಿಗೆ ಮಾತ್ರ ಕೊಡಬೇಕು.

೪. ಸಾಲದ ಉದ್ದೇಶ ಕೇವಲ ಸದಸ್ಯರಿಗೆ ಸಹಾಯ ಮಾಡುವುದೇ ವಿನಃ ಲಾಭಗಳಿಸಲು ಅಲ್ಲ.

೫. ಸದಸ್ಯರ ಹೊಣೆಗಾರಿಕೆ ಅಮಿತವಾಗಿರಬೇಕು. ಎಂದರೆ ಸಂಘದ ಸಾಲವನ್ನು ತೀರಿಸುವ ಜವಾಬ್ದಾರಿ ಸದಸ್ಯರುಗಳಿಗೆ ವೈಯಕ್ತಿಕವಾಗಿಯೂ ಮತ್ತು ಸಾಮೂಹಿಕವಾಗಿಯೂ ಇರಬೇಕು.

ಷೂಲ್ಸ್-ಡಿ-ಅಟ್ಸ್ ಮಾದರಿಯ ಸಂಘಗಳ ಕಾರ್ಯಕ್ಷೇತ್ರ ಹೆಚ್ಚು ವಿಸ್ತಾರವಾಗಿರುವುದು. ಸದಸ್ಯರಿಗೆ ಮಿತ ಹೊಣೆಗಾರಿಕೆಯಿರುವುದು. ಅಂದರೆ ಅದರ ಹೊಣೆಗಾರಿಕೆ ಅವರ ಷೇರು ಹಣಕ್ಕೆ ಮಾತ್ರ ಮಿತಿಯಾಗಿರುವುದು.

ಸಹಕಾರಸಂಘಗಳನ್ನು ಅವುಗಳ ಕೆಲಸಕಾರ್ಯಗಳಿಗೆ ಅನುಸಾರವಾಗಿ ೪ ಬಗೆಯಾಗಿ ವಿಂಗಡಿಸಬಹುದು. ಅವುಗಳು ಯಾವುವೆಂದರೆ—

೧. ಉತ್ಪಾದಕರ ಸಹಕಾರ ಸಂಘ.

೨. ಅನುಭೋಗಿಗಳ ಸಹಕಾರ ಸಂಘ.

೩. ಲೇವಾದೇವಿ ಸಹಕಾರ ಸಂಘ.

೪. ವಿವಿಧೋದ್ದೇಶ ಸಹಕಾರ ಸಂಘ.

ಇಂದು ಜಗತ್ತಿನ ಎಲ್ಲೆಡೆಗಳಲ್ಲೂ ಈ ೪ ಬಗೆಯ ಸಹಕಾರ ಸಂಘಗಳಿರುವುವು.



## ಅಭ್ಯಾಸ ೮

# ರಾಷ್ಟ್ರ ಮತ್ತು ಆರ್ಥಿಕ ಜೀವನ

ರಾಷ್ಟ್ರ ಮತ್ತು ಆರ್ಥಿಕ ಜೀವನದ ಬಗ್ಗೆ ಅಭ್ಯಾಸಮಾಡುವಾಗ ಅರ್ಥ ಶಾಸ್ತ್ರಕ್ಕೂ ಮತ್ತು ರಾಜ್ಯಶಾಸ್ತ್ರಕ್ಕೂ ಇರುವ ನಿಕಟಸಂಬಂಧದ ಅರಿವು ನಮಗೆ ಚೆನ್ನಾಗಿ ಆಗಿರಬೇಕು. ಆಧುನಿಕ ರಾಜ್ಯ ಸುಖೀ ರಾಜ್ಯ ಅಥವಾ ಕಲ್ಯಾಣ ರಾಜ್ಯವೆಂದು ಕರೆಯಲ್ಪಡುವುದು. ಸಮಾಜದ ಹಿತಸಾಧನೆ ಮತ್ತು ಜನರ ಕ್ಷೇಮಾಭ್ಯುದಯವೇ ಆಧುನಿಕ ರಾಷ್ಟ್ರಗಳ ಮುಖ್ಯ ಧ್ಯೇಯಗಳಾಗಿರುವುವು. ಇವುಗಳನ್ನು ಸಾಧಿಸಲು ಸರಕಾರ ಜನರ ಆರ್ಥಿಕ ಜೀವನದಲ್ಲಿ ಪ್ರವೇಶಮಾಡಬೇಕಾಗಿರುವುದು. ಯಾವ ರಾಷ್ಟ್ರದ ಆರ್ಥಿಕ ಸ್ಥಿತಿ ಚೆನ್ನಾಗಿರುವುದಿಲ್ಲವೋ ಅಂತಹ ರಾಷ್ಟ್ರ ಹಲವಾರು ಬಗೆಯ ತೊಂದರೆಗಳನ್ನು ಅನುಭವಿಸಬೇಕಾಗುವುದು. ಪ್ರತಿಯೊಂದು ರಾಷ್ಟ್ರದ ರಾಜಕೀಯ ಸಮಸ್ಯೆಗಳೆಲ್ಲಾ ಅಲ್ಲಿನ ಆರ್ಥಿಕ ವಿಷಯಗಳನ್ನು ಹೊಂದಿಕೊಂಡಿರುವುವು. ಇಂಗ್ಲೆಂಡಿನಲ್ಲಿ ಕೈಗಾರಿಕಾ ಕ್ರಾಂತಿಯಾದ ನಂತರ ಎಲ್ಲಾ ದೇಶಗಳಲ್ಲೂ ಆರ್ಥಿಕ ಚಟುವಟಿಕೆಗಳು ಅಧಿಕಪಾಲು ಹೆಚ್ಚಾದುವು. ಆಗ ಸರಕಾರವು ಕೂಡ ಜನರ ಆರ್ಥಿಕ ಜೀವನದಲ್ಲಿ ಅಧಿಕವಾಗಿ ಭಾಗವಹಿಸಲು ಪ್ರಾರಂಭಿಸಿತು.

## ೧. ಆಧುನಿಕ ರಾಷ್ಟ್ರದ ಕೆಲಸ ಕಾರ್ಯಗಳು

ಆಧುನಿಕ ರಾಷ್ಟ್ರದ ಕಾರ್ಯಕ್ಷೇತ್ರ ಬಹಳ ವಿಶಾಲವಾದುದು. ಹಿಂದಿನ ಕಾಲದಲ್ಲಿ ರಾಷ್ಟ್ರಗಳು ಸಣ್ಣವಿದ್ದು ಮತ್ತು ರಾಜ್ಯದ ಜನಸಂಖ್ಯೆ ಕೂಡ ಕಡಿಮೆಯಿದ್ದುದರಿಂದ ಸರಕಾರ ಎದುರಿಸಬೇಕಾಗಿದ್ದ ಸಮಸ್ಯೆಗಳು ಕೂಡ ಕಡಿಮೆಯಿದ್ದವು. ಆದರೆ ಇಂದಿನ ಬೃಹತ್ ರಾಷ್ಟ್ರಗಳು ಅನೇಕ ಬಗೆಯ ಕೆಲಸಕಾರ್ಯಗಳನ್ನು ಮಾಡಬೇಕಾಗಿರುವುವು. ಅವುಗಳಲ್ಲಿ ಮುಖ್ಯವಾದವು ಗಳೆಂದರೆ—

### ೧. ರಕ್ಷಣಾ ಕಾರ್ಯ :

ದೇಶದಲ್ಲಿ ಶಾಂತಿ ಮತ್ತು ನೆಮ್ಮದಿಯನ್ನು ಕಾಪಾಡುವುದು ಪ್ರತಿಯೊಂದು ರಾಜ್ಯದ ಮುಖ್ಯವಾದ ಸಮಸ್ಯೆಯಾಗಿರುವುದು. ಜನರ ಪ್ರಾಣ ಮತ್ತು ಆಸ್ತಿಪಾಸ್ತಿಗಳನ್ನು ರಕ್ಷಿಸುವುದು, ಪರರಾಷ್ಟ್ರಗಳ ಆಕ್ರಮಣ ಕಾರ್ಯಗಳನ್ನು ತಡೆಗಟ್ಟುವುದು ಇವೇ ಮುಂತಾದ ರಕ್ಷಣಾ ಕಾರ್ಯಗಳನ್ನು ರಾಷ್ಟ್ರವು ಮಾಡುತ್ತದೆ.

### ೨. ಆಡಳಿತ ಕಾರ್ಯಗಳು :

ಜನಜೀವನದ ಎಲ್ಲಾ ಅಂಗಗಳನ್ನು ಸರಿಯಾಗಿ ನಡೆಸಿಕೊಂಡು ಹೋಗುವುದು ಆಡಳಿತ ಕಾರ್ಯವೆಂದೆನಿಸುವುದು.

### ೩. ಕಲ್ಯಾಣ ಕಾರ್ಯಗಳು :

ರಾಷ್ಟ್ರ ಕೇವಲ ಶಾಂತಿ ಮತ್ತು ಸುಭದ್ರತೆಗಳನ್ನು ಕಾಪಾಡಿಕೊಂಡರೆ ಸಾಲದು. ಇವುಗಳೊಂದಿಗೆ ಜನರ ಕಲ್ಯಾಣಕ್ಕೆ ಆವಶ್ಯಕವಾಗಿ ಬೇಕಾಗುವ ಹಲವಾರು ಕೆಲಸಕಾರ್ಯಗಳನ್ನು ಮಾಡಬೇಕಾಗಿರುವುದು. ಕಲ್ಯಾಣ ಕೆಲಸಗಳಲ್ಲಿ ಮುಖ್ಯವಾದವುಗಳೆಂದರೆ, ಬಡಜನರಿಗೆ, ಕಾಯಿಲಸ್ಥರಿಗೆ, ಶಕ್ತಿಹೀನರಿಗೆ, ನಿರುದ್ಯೋಗಿಗಳಿಗೆ ಮತ್ತು ವಯಸ್ಕರರಿಗೆ ಸೂಕ್ತ ಪರಿಹಾರವನ್ನು ನೀಡಿ ಅವರ ಕ್ಷೇಮಾಭ್ಯುದಯವನ್ನು ನೋಡಿಕೊಳ್ಳುವುದು. ಮತ್ತು ಕಾರ್ಖಾನೆಗಳಲ್ಲಿ ಕೆಲಸ ಮಾಡುವವರಿಗೆ ಕನಿಷ್ಟ ಜೀವನ ಸೌಕರ್ಯಗಳನ್ನು ಒದಗಿಸುವುದು ಒಂದು ಮುಖ್ಯವಾದ ಕೆಲಸ. ಕಲ್ಯಾಣ ರಾಜ್ಯ ಜನರ ಮತ್ತು

ಜನರಿಗಾಗಿರುವ ರಾಜ್ಯ ಮತ್ತು ಇದರಲ್ಲಿ ಜನ ಕಲ್ಯಾಣವೇ ಪ್ರಮುಖ ಗುರಿಯಾಗಿರುವುದು.

**೪. ಆರ್ಥಿಕ ಮತ್ತು ವಾಣಿಜ್ಯ ಕಾರ್ಯಗಳು :**

ರಾಷ್ಟ್ರದಲ್ಲಿ ವ್ಯಾಪಾರ, ವಾಣಿಜ್ಯ, ಕೈಗಾರಿಕೆ, ಬೇಸಾಯ ಇವೇ ಮುಂತಾದ ಆರ್ಥಿಕ ವಿಷಯಗಳು ಸರಿಯಾಗಿ ನಡೆದುಕೊಂಡು ಹೋಗು ವುದನ್ನು ನೋಡಿಕೊಳ್ಳತಕ್ಕದ್ದು. ಸಾರಿಗೆ ಮತ್ತು ಸಂಚಾರ ವ್ಯವಸ್ಥೆಗಳನ್ನು ಸರಿಯಾಗಿ ನಡೆಸಿಕೊಂಡು ಹೋಗತಕ್ಕದ್ದು. ಈ ರೀತಿಯ ಹಲವಾರು ಕೆಲಸಕಾರ್ಯಗಳನ್ನು ಇಂದಿನ ರಾಷ್ಟ್ರ ಕೈಗೊಳ್ಳಬೇಕಾಗುವುದು.

ಇದರಿಂದಲೇ ಆಧುನಿಕ ರಾಷ್ಟ್ರವನ್ನು ಸುಖೀ ರಾಷ್ಟ್ರ ಅಥವಾ ಕಲ್ಯಾಣ ರಾಷ್ಟ್ರವೆಂದು ಕರೆಯುತ್ತೇವೆ. ಮುಖ್ಯವಾಗಿ ಕಲ್ಯಾಣ ರಾಜ್ಯ ಹೆಚ್ಚು ಹೆಚ್ಚು ಜನರಲ್ಲಿ ಹೆಚ್ಚೆಚ್ಚು ಸಂತೋಷವನ್ನುಂಟುಮಾಡಬೇಕು. ಇದೇ ರಾಷ್ಟ್ರದ ಮುಖ್ಯ ಧ್ಯೇಯ. ಯಾವ ರಾಜ್ಯ ಅಥವಾ ಸರಕಾರ ಜನರ ಹಿತ ಕಲ್ಯಾಣದೆಡೆಗೆ ಪ್ರಯತ್ನಿಸುವುದಿಲ್ಲವೋ ಅಲ್ಲಿ ಕ್ರಾಂತಿ ಮತ್ತು ಕ್ಷೋಭೆ ಉಂಟಾಗುವುದು. ಸಮಾಜದಲ್ಲಿ ಶಾಂತಿ ಸುಭದ್ರತೆ ಮತ್ತು ನೆಮ್ಮದಿಯನ್ನು ನೆಲೆಸಬೇಕಾದರೆ ಅಲ್ಲಿಯ ಆರ್ಥಿಕ ವಿಷಯಗಳ ಅಭಿವೃದ್ಧಿಯನ್ನು ಮಾಡ ಬೇಕಾಗುವುದು. ಆರ್ಥಿಕ ಕ್ಷೇತ್ರದಲ್ಲಿ ಸಮೃದ್ಧತೆಯಿದ್ದರೆ ರಾಜ್ಯ ನಿಜಕ್ಕೂ ಕಲ್ಯಾಣ ರಾಜ್ಯವಾಗುವುದರಲ್ಲಿ ಸಂದೇಹವಿಲ್ಲ; ಮತ್ತು ಜನರು ಕೂಡ ಸುಖವಾಗಿರುವರು.

## ೨. ರಾಜ್ಯದ ಕೈಗಾರಿಕಾ ನೀತಿ

ಒಂದು ರಾಷ್ಟ್ರದ ಕೈಗಾರಿಕಾ ನೀತಿಯು ಅಲ್ಲಿನ ರಾಜಕೀಯ ಮತ್ತು ಆರ್ಥಿಕ ವಿಷಯಗಳನ್ನು ಅವಲಂಬಿಸಿರುತ್ತದೆ. ಸರಕಾರವು ತನ್ನ ಕೈಗಾರಿಕಾ ನೀತಿಯನ್ನು ಅನೇಕ ಬಗೆಯಲ್ಲಿ ನಿರೂಪಿಸಬಹುದು. ಮೊದಲನೆಯದಾಗಿ ಸರಕಾರವೇ ಕೈಗಾರಿಕೆಗಳನ್ನು ಪ್ರಾರಂಭಿಸಿ ಅವುಗಳನ್ನು ನಡೆಸಿಕೊಂಡು ಹೋಗುವುದು. ಎರಡನೆಯ ನೀತಿಯೆಂದರೆ ಖಾಸಗೀ ವಲಯದಲ್ಲಿ ಕೈಗೊಳ್ಳುವ ಕೈಗಾರಿಕೋದ್ಯಮಗಳಿಗೆ ಸಲಹೆ ಮತ್ತು ಸಹಾಯ ನೀಡುವುದು; ಮತ್ತು ಕಾರ್ಮಿಕರ ಹಿತದೃಷ್ಟಿಯನ್ನು ಕಾಪಾಡಲು ತಕ್ಕ ಕಾನೂನುಗಳನ್ನು ಮಾಡುವುದು.

ಮಿಶ್ರ ಆರ್ಥಿಕತೆ ನೀತಿಯಿರುವ ರಾಷ್ಟ್ರಗಳಲ್ಲಿ ಕೈಗಾರಿಕಾ ಕ್ರಮ ಯಾವಾಗಲೂ ಈ ರೀತಿಯಲ್ಲಿರುವುದು. ಜನಜೀವನದ ಮತ್ತು ಸಾಮಾಜಿಕ ದೃಷ್ಟಿಯಿಂದ ಮುಖ್ಯವಾದ ಕೆಲವು ಉದ್ಯಮಗಳನ್ನು ಅಂದರೆ ರೈಲು, ನೀರಿನ ಸರಬರಾಜು ಮೊದಲಾದವುಗಳನ್ನು ಸರಕಾರವೇ ನಡೆಸಿಕೊಂಡು ಹೋಗುವುದು. ರಾಷ್ಟ್ರದಲ್ಲಿನ ಹೆಚ್ಚು ಜನರಿಗೆ ಅನ್ವಯಿಸುವ ಉದ್ಯಮಗಳನ್ನು ಸರಕಾರವೇ ಹತೋಟಿಯಲ್ಲಿಟ್ಟುಕೊಳ್ಳುವುದು. ಕೈಗಾರಿಕೆಗಳು, ಕೃಷಿ, ವ್ಯಾಪಾರ ಮೊದಲಾದವುಗಳನ್ನು ಖಾಸಗೀ ವಲಯದಲ್ಲಿ ಮಾಡುವರು. ಖಾಸಗೀ ವಲಯದಲ್ಲಿ ಸರಿಯಾಗಿ ನಡೆಯದಿದ್ದರೆ, ಅಂತಹ ಉದ್ದಿಮೆಗಳನ್ನು ಸರಕಾರವೇ ತೆಗೆದುಕೊಂಡು ನಡೆಸುವುದು. ಸಂಪೂರ್ಣ ಖಾಸಗೀ ವಲಯದಲ್ಲಿ ನಡೆಸಲ್ಪಡುವ ಉದ್ಯಮಗಳಿಗೆ ಪ್ರೈವೇಟ್ ಸೆಕ್ಟರ್ ಉದ್ಯಮಗಳೆಂದೂ, ಸರಕಾರವು ತಾನೇ ಸ್ವಂತವಾಗಿ ನಡೆಸುವ ಉದ್ಯಮಗಳಿಗೆ ಪಬ್ಲಿಕ್ ಸೆಕ್ಟರ್ ಉದ್ಯಮಗಳೆಂದೂ ಹೇಳುವರು.

## ೩. ವೇತನ ನಿಯಂತ್ರಣ

ಇಂದಿನ ಪ್ರಪಂಚದಲ್ಲಿ ಕಲ್ಯಾಣ ರಾಷ್ಟ್ರಗಳು ಜನರ ಕ್ಷೇಮಕ್ಕಾಗಿ ಹಲವಾರು ಕೆಲಸಕಾರ್ಯಗಳನ್ನು ಮಾಡುತ್ತಿವೆ. ಒಂದು ರಾಷ್ಟ್ರದ ಜೀವನಾಡಿಗಳಂತಿರುವ ಕೂಲಿಕಾರ ಜನರ ಏಳಿಗೆಗಾಗಿ ಸರಕಾರವು ಅನೇಕ ಕಾರ್ಮಿಕ ಕಾಯಿದೆಗಳನ್ನು ಜಾರಿಗೆ ತಂದಿವೆ. ಇಂತಹ ಕಾಯಿದೆಗಳಲ್ಲಿ ಹೆಚ್ಚು ಪ್ರಯೋಜನಕಾರಿಯಾಗಿರುವುದೆಂದರೆ ಕೆಲಸಗಾರರ ಕನಿಷ್ಟವೇತನ ನಿರ್ಣಯ ಮಾಡುವುದಾಗಿದೆ. ಕೆಲಸಗಾರರಿಗೆ ನ್ಯಾಯವಾದ ಮತ್ತು ದೈನಂದಿನ ಜೀವನಕ್ಕೆ ಸಾಕಾಗುವಷ್ಟು ಸಂಬಳವನ್ನು ಕೊಡಬೇಕೆಂಬ ನಿಯಮವಿರುವುದು ಮತ್ತು ಕೂಲಿಯವರ ಕೆಲಸದ ವೇಳೆಯನ್ನು ಕೂಡ ನಿಗದಿಪಡಿಸಲಾಗಿರುವುದು. ಕಾರ್ಖಾನೆಗಳಲ್ಲಿ ಕೆಲಸಗಾರರಿಗೆ ಎಲ್ಲಾ ಬಗೆಯ ಸೌಕರ್ಯಗಳನ್ನು ಒದಗಿಸಿಕೊಡಬೇಕಾಗುವುದು. ಕೆಲಸಗಾರರಿಗೆ ತಮ್ಮ ಕೆಲಸದ ವೇಳೆಯಲ್ಲಿ ಏನಾದರೂ ಅಪಾಯ ಸಂಭವಿಸಿದರೆ ಅದಕ್ಕೆ ಸೂಕ್ತ ಪರಿಹಾರವನ್ನು ಕೊಡಬೇಕು. ಕೈಗಾರಿಕೆಯಲ್ಲಿ ದೊರಕಿದ ಲಾಭದಲ್ಲಿ ಸ್ವಲ್ಪ ಭಾಗವನ್ನು ಕಾರ್ಮಿಕರಿಗೆ ಬೋನಸ್ ರೂಪದಲ್ಲಿ ಕೊಡಬೇಕು. ಎಲ್ಲಾ ಕಾರ್ಮಿಕರಿಗೆ ಪ್ರಾವಿಡೆಂಟ್ ಫಂಡಿನ ವ್ಯವಸ್ಥೆ ಮತ್ತು ಇನ್ನಿತರ ಕ್ಷೇಮನಿಧಿಯ ಅನುಕೂಲತೆಗಳನ್ನು ಮಾಡಿಕೊಡಬೇಕು.

ನಮ್ಮ ದೇಶದಲ್ಲಿ ಕೂಡ ಕೂಲಿಗಾರ ಅನೇಕ ಮಸೂದೆಗಳು ಜಾರಿಗೆ ಬಂದವು. ೧೯೪೮ ರಲ್ಲಿ ಕನಿಷ್ಟ ವೇತನ ಪ್ರಮಾಣದ ಕಾಯಿದೆ ಜಾರಿಗೆ ಬಂತು. ಇದರ ಪ್ರಕಾರ ಕೂಲಿಕಾರರಿಗೆ ಅನುಕೂಲವಾಗುವಂತಹ ಅನೇಕ ಕಾನೂನುಗಳನ್ನು ಮಾಡಲಾಯಿತು. ಮುಖ್ಯವಾಗಿ ಕೆಲವು ದೊಡ್ಡ ಉದ್ದಿಮೆಗಳಲ್ಲಿ ಸರಕಾರ ನಿಗದಿಪಡಿಸಿದ ಪ್ರಮಾಣಕ್ಕಿಂತ ಕಡಿಮೆ ಕೂಲಿಯನ್ನು ಕಾರ್ಮಿಕರಿಗೆ ಕೊಡುವಂತಿಲ್ಲ. ಒಂದು ವಾರದಲ್ಲಿ ೪೮ ತಾಸುಗಳಿಗಿಂತ ಹೆಚ್ಚಾಗಿ ದುಡಿಯುವಂತಿಲ್ಲ ; ೧೪ ವರ್ಷ ಕಡಿಮೆ ಪ್ರಾಯದವರನ್ನು ಕೆಲಸಕ್ಕೆ ತೆಗೆದುಕೊಳ್ಳಕೂಡದು. ಹೆಣ್ಣು ಮಕ್ಕಳು ರಾತ್ರಿಯ ವೇಳೆಯಲ್ಲಿ ಕಾರ್ಖಾನೆಗಳಲ್ಲಿದುಡಿಯ ಕೂಡದು. ಮತ್ತು ಎಲ್ಲಾ ಕೂಲಿ ಜನರಿಗೆ ಜೀವನದ ಆಧುನಿಕ ಸೌಲಭ್ಯಗಳನ್ನು ಒದಗಿಸಿಕೊಡತಕ್ಕದ್ದು. ಇವೇ ಮೊದಲಾದ ಹಲವಾರು ಕಾಯಿದೆಗಳು ಜಾರಿಯಲ್ಲಿ ಬಂದಿರುವುವು.

## ೪. ಸಾಮಾಜಿಕ ಭದ್ರತೆ

ಒಂದು ರಾಷ್ಟ್ರದಲ್ಲಿ ಜನರಿಗೆ ತಮ್ಮ ವ್ಯಕ್ತಿತ್ವವನ್ನು ಬೆಳೆಸಲು ಮತ್ತು ಸಮಾಜದಲ್ಲಿ ತಮ್ಮ ಪಾತ್ರಗಳನ್ನು ಸರಿಯಾಗಿ ನಿರ್ವಹಿಸಲು ಅವರಿಗೆ ಮುಖ್ಯವಾಗಿ ಸಾಮಾಜಿಕ ಸುಭದ್ರತೆಯ ವ್ಯವಸ್ಥೆಯಿರಬೇಕು. ನಮ್ಮ ದೇಶದಲ್ಲಿ ಸಾಮಾಜಿಕ ಭದ್ರತೆಯೆಡೆಗೆ ಹೆಚ್ಚಾಗಿ ಏನೂ ಮಾಡಲಾಗಿರುವುದಿಲ್ಲ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಸಾಮಾಜಿಕ ಭದ್ರತೆಯಸಲುವಾಗಿ ಅನೇಕ ಕಾಯಿದೆಗಳನ್ನು ಜಾರಿಗೆ ತಂದಿರುವರು. ಈ ರಾಷ್ಟ್ರಗಳಲ್ಲಿ ಜನರ ಕ್ಷೇಮಾಭ್ಯುದಯವನ್ನು ಹುಟ್ಟಿನಿಂದ ಸಾಯುವ ತನಕ ಸರಕಾರ ನೋಡಿಕೊಳ್ಳುವುದು. ಸಾಮಾಜಿಕ ಭದ್ರತೆಯಿರುವ ರಾಷ್ಟ್ರಗಳಲ್ಲಿ ಮಕ್ಕಳ ವಿದ್ಯಾಭ್ಯಾಸಕ್ರಮ, ಜನರಿಗೆ ಉದ್ಯೋಗದ ಅವಕಾಶ, ನಿರುದ್ಯೋಗ ವಿಮೆಯ ಸೌಲಭ್ಯ ಕಾರ್ಮಿಕರಿಗೆ ಕಾಯಿಲೆಯವಿಮೆ, ವಯಸ್ಕರರಿಗೆ ಜೀವನವೇತನ ಸೌಲಭ್ಯ, ಇವೇ ಮುಂತಾದವುಗಳನ್ನು ಸರಕಾರವೇ ಕೈಗೊಳ್ಳುವುದು. ಇವೇ ಸಾಮಾಜಿಕ ಭದ್ರತೆಯ ಮುಖ್ಯ ಅಡಿಪಾಯಗಳಾಗಿರುವುದರಿಂದ ಇವುಗಳು ಜಾರಿಯಲ್ಲಿರುವ ರಾಷ್ಟ್ರಗಳಲ್ಲಿ ಶಾಂತಿ ಮತ್ತು ನೆಮ್ಮದಿ ಜನರಲ್ಲಿ ಮೂಡಿರುವುದು.

## ೫. ವರಮಾನ ಮತ್ತು ಆಸ್ತಿಯ ಮಿತಿ

ಸಮತಾ ಸಮಾಜವಾದ ಪದ್ಧತಿಯನ್ನು ಹೊಂದಲು ಪ್ರಯತ್ನಿಸುವ ರಾಷ್ಟ್ರಗಳು ಮುಖ್ಯವಾಗಿ ಮಾಡಬೇಕಾಗಿರುವ ಸುಧಾರಣೆಯೆಂದರೆ ವರಮಾನ ಮತ್ತು ಆಸ್ತಿಯ ಹೊಂದುವಿಕೆಯಲ್ಲಿ ಒಂದು ನಿರ್ದಿಷ್ಟವಾದ ಮಿತಿಯನ್ನುಂಟುಮಾಡುವುದು. ಬಂಡವಾಳ ಪದ್ಧತಿಯ ರಾಷ್ಟ್ರಗಳಲ್ಲಿ ಯಾವಾಗಲೂ ಜನರಲ್ಲಿ ಆರ್ಥಿಕ ಅಸಮಾನತೆಯುಂಟಾಗುವುದು. ಈ ಅಸಮಾನತೆ ದಿನೇ ದಿನೇ ಹೆಚ್ಚುತ್ತ ಬರುವುದು. ಐಶ್ವರ್ಯವಂತರು ಹೆಚ್ಚೆಚ್ಚು ಹಣವಂತರಾಗುವರು ಮತ್ತು ಬಡವರು ಬಡವರಾಗಿಯೇ ಉಳಿಯುವರು. ಈ ರೀತಿಯ ಆರ್ಥಿಕ ಅಸಮಾನತೆಯಿಂದ ದೇಶದಲ್ಲಿ ಆಗಾಗ್ಗೆ ದಂಗೆ ಗಲಭೆಗಳು ಉಂಟಾಗುವುವು. ಜನರಲ್ಲಿ ಪರಸ್ಪರ ಪ್ರೀತಿ, ವಿಶ್ವಾಸ, ಸೌಹಾರ್ದತೆ ಕಳೆದು ಹೋಗಿ ವೈರತ್ವ ನೆಲಸುವುದು. ಈ ರೀತಿಯ ಪರಿಸ್ಥಿತಿಯನ್ನು ತಡೆಗಟ್ಟಲು ಸರಕಾರವು ಸೂಕ್ತವಾದ ಕಾನೂನುಗಳನ್ನು ಮಾಡಿ, ದೇಶದಲ್ಲಿ ಆರ್ಥಿಕ ಸಮಾನತೆಯನ್ನುಂಟುಮಾಡಲು ಪ್ರಯತ್ನಿಸಬೇಕು. ಶ್ರೀಮಂತರ ಮೇಲೆ ಹೆಚ್ಚು ತೆರಿಗೆಗಳನ್ನು ಹೊರಬೇಕು. ಬಡವರಿಗೆ ತೆರಿಗೆಗಳ ಭಾರ ಸಾಧ್ಯವಾದಷ್ಟು ಕಡಿಮೆಯಿರಬೇಕು. ಜನಜೀವನಕ್ಕೆ ಅತ್ಯಾವಶ್ಯಕವಾದ ಉದ್ದಿಮೆಗಳನ್ನು ರಾಷ್ಟ್ರೀಕರಣಮಾಡಬೇಕು. ಜನರ ಖಾಸಗಿ ಉತ್ಪನ್ನ ಮತ್ತು ಆಸ್ತಿಗಳ ಮೇಲೆ ನಿಯಂತ್ರಣಯಿರಬೇಕು. ಬಡವ ಬಲ್ಲಿದ, ಇರುವವ ಮತ್ತು ಇಲ್ಲದವ ಎಂಬ ಭೇದ ಕಡಿಮೆಯಾಗಬೇಕು. ಜನರ ವರಮಾನದ ಅಂತರ ಅತಿ ಹೆಚ್ಚಿನದಿರಬಾರದು.

ಭಾರತ ರಾಷ್ಟ್ರ ಈಗ ಸಮತಾಸಮಾಜವಾದವನ್ನು ಗುರಿಯಲ್ಲಿಟ್ಟುಕೊಂಡು ಮುಂದೆ ಸಾಗುತ್ತಿದೆ. ನಮ್ಮ ಸರಕಾರ ಭೂಸುಧಾರಣೆ, ಪಟ್ಟಣ ಮತ್ತು ನಗರಗಳಲ್ಲಿ ಆಸ್ತಿಯ ನಿಯಂತ್ರಣ ಮತ್ತು ಜನರ ವರಮಾನ ಮಿತಿ ಇವುಗಳೆಡೆಗೆ ಅನೇಕ ಮಹತ್ತರವಾದ ಕಾನೂನುಗಳನ್ನು ಮಾಡಿ ಅವುಗಳ ಮೂಲಕ ಸಮಾಜವಾದದೆಡೆಗೆ ಪ್ರಯತ್ನಿಸುತ್ತಿರುವುದು. ಎಲ್ಲಿಯವರೆಗೆ ಸಮಾಜದಲ್ಲಿ ಆರ್ಥಿಕ ಅಸಮಾನತೆಯ ಅಂತರ ಕಡಿಮೆಯಾಗುವುದಿಲ್ಲವೋ ಅಂತಹ ರಾಷ್ಟ್ರಗಳಲ್ಲಿ ಪ್ರಗತಿ ಕುಂಠಿತವಾಗಿಬಿಡುವುದು ಮತ್ತು ಅಶಾಂತಿ ಮತ್ತು ಅಸಮಾಧಾನ ಜನರಲ್ಲಿ ಮೂಡುವುದು.

